# ಕೊಡಗು  ಸಂಗಾತಿ

ಸಂಪಾದಕಿ : ಪಟ್ಟಡ ಶೀಲಾಮಣಿ ಕನ್ನಡ ಮತ್ತು ಅರೆಭಾಷೆಯ ಏಕೈಕ ಪಾಕ್ಷಿಕ ಪತ್ರಿಕೆ

K.R.N.N. 240 ಸಂಪುಟ : 3 ಸಂಚಿಕೆ : 3 ಫೆಬ್ರವರಿ 1 ರಿಂದ 15, 1999 ಪುಟಗಳು : 24 ರೂ. 5

[ಲೇಖನ ಒಳಪುಟಗಳಲ್ಲಿ]

ರಾಷ್ಟ್ರದ ಕಿರಿಯರ ಬಾಸ್ಕೆಟ್ ಬಾಲ್ ಕ್ರೀಡೆಯಲ್ಲಿ ಕರ್ನಾಟಕವನ್ನು ಪ್ರತಿನಿಧಿಸಿದ
ಉಜ್ವಲ ಭವಿಷ್ಯವಿರುವ ತರುಣ ಕಟ್ಟಿಮನೆ ಗಣೇಶ್ ಪ್ರಣಾಮ್




ವಿಳಾಸ :

**ಎಂ. ಗಂಗಾಧರಗೌಡರು**

ಪರ್ಣ ಕುಟೀರಂ

ಅಂಚೆ : ಉಬರಡ್ಕ ಮಿತ್ತೂರು

ಸುಳ್ಯ, ದ. ಕ.

ದೂರವಾಣಿ : **08257/20506**



## ಪ್ರಕಟಣೆ

## ಪ್ರೇಮ ಸಾಹಿತ್ಯ ಪ್ರಕಾಶನ

ಉಬರಡ್ಕ ಮಿತ್ತೂರು, ಸುಳ್ಯ, ದಕ್ಷಿಣ ಕನ್ನಡ.

ನಮ್ಮ ಹೆಮ್ಮೆಯ ಕವಿ

**ಮಂಡೆಕೋಲು ಗಂಗಾಧರಗೌಡರ ಕೃತಿಗಳು ಲಭ್ಯ**

೧. ಶಿಶುಕಾವ್ಯ–ಕೆಲವೇ ಪ್ರತಿಗಳಿವೆ. ಬೆಲೆ ರೂ. **8-00**

೨. ನೊಂದ ಹೃದಯ [ನಾಟಕ] ಮುಗಿದಿದೆ ರೂ. **5-00**

೩. ಸಾಹಿತ್ಯ ಪ್ರೇಮಿ [ನಾಟಕ] — ರೂ. **20-00**

೪. ಭಕ್ತಿದರ್ಶನ [ಸ್ತುತಿಗಳು] ಮುಗಿದಿದೆ ರೂ. **12-00**

೫. ಕಾವ್ಯದರ್ಶನ [ದ್ವಿತಿಯ ಮುದ್ರಣದಲ್ಲಿದೆ] ರೂ. **20-00**

೬. ಕಾಡೂರ ಬಾಳು [ಕೆಲವೇ ಪ್ರತಿಗಳಿವೆ] ರೂ. **25-00**

**ಪತ್ರ ಬರೆದು ಪುಸ್ತಕಗಳನ್ನು ಅಂಚೆ ಮೂಲಕ ತರಿಸಿಕೊಳ್ಳಿರಿ**

**ಪ್ರಕಾಶಕರು**


---

## ಚಂದದಾರರಲ್ಲಿ ವಿನಂತಿ

ಕೊಡಗು ಸಂಗಾತಿ ಚಂದದಾರರು ತಮ್ಮ ಸದಸ್ಯತನದ ಹಣವನ್ನು ಪಾವತಿಸಿ ಆದಷ್ಟು ಶೀಘ್ರವಾಗಿ ನವೀಕರಿಸಿಕೊಳ್ಳಬೇಕಾಗಿ ವಿನಂತಿ. ಹಣವನ್ನು ಎಂ. ಓ. ಮತ್ತು ಡಿ. ಡಿ. ಮೂಲಕ ಮಾತ್ರ ಕಳುಹಿಸಿ. ಮೈಸೂರಿನ ಸ್ಥಳೀಯ ಚೆಕ್ ಸ್ವೀಕರಿಸಲಾಗುವುದು. ಮಡಿಕೇರಿ ಮತ್ತು ಇತರ ನಮ್ಮ ಕಛೇರಿಗಳಲ್ಲೂ ಚಂದಾ ಕೊಟ್ಟು ರಶೀತಿ ಪಡೆಯಬಹುದು. ಹಾಗೆಯೇ ಶುಭಾಶಯ/ಜಾಹಿರಾತು ಕೊಡುವವರು 15 ದಿನಗಳ ಮುಂಚಿತವಾಗಿ ನಿಗದಿತ ಹಣದೊಡನೆ ಕಛೇರಿಗೆ ತಲುಪಿಸತಕ್ಕದ್ದು.

ಚಂದದಾರರ ವಿಳಾಸ ಬದಲಾದಲ್ಲಿ ದಯವಿಟ್ಟು ಕೂಡಲೇ ತಿಳಿಸುವುದು.

**ಚಂದಾ ವಿವರ**

| | |
|---|---|
| ವಾರ್ಷಿಕ | 120/- |
| ಜೀವಾವಧಿ | 2000/- |

**ಜಾಹಿರಾತು**

| | |
|---|---|
| 1/8 ಪುಟಕ್ಕೆ | 150 |
| 1/4 ಪುಟಕ್ಕೆ | 250 |
| 1/2 ಪುಟಕ್ಕೆ | 500 |
| 1 ಪುಟಕ್ಕೆ | 1000 |
| ಕೊನೆ ಪುಟಕ್ಕೆ | 1500 |

[ಬ್ಲಾಕ್ ಚಾರ್ಜ್ ಪ್ರತ್ಯೇಕ]

—ಸಂಪಾದಕಿ

## ಕೊಡಗು ಸಂಗಾತಿ

ಸಂಪಾದಕಿ, ಪ್ರಕಾಶಕಿ :
**ಪಟ್ಟೆಡ ಪಿ. ಶೀಲಾಮಣಿ**
ಗೌರವ ಸಂಪಾದಕ :
**ಪಟ್ಟೆಡ ಎಂ. ಪ್ರಭಾಕರ**
ಮುದ್ರಕರು :
**ಮಣ್ಣಂಡ್ರ ಕೆ. ತಮ್ಮಯ್ಯ**

ಚಂದಾ ಕಳುಹಿಸುವ ಮತ್ತು
ಜಾಹೀರಾತು ಪ್ರಸಾರ ಕಛೇರಿ :
**ಕೊಡಗು ಸಂಗಾತಿ**
ನಂ. 35, **"ಸವಿತಾ ನಿಲಯ"**
1ನೇ ಕ್ರಾಸ್, 4ನೇ ಬ್ಲಾಕ್,
ಡಿವಿಜನಲ್ ಟೆಲಿಕಾಂ ಕಛೇರಿ ಹತ್ತಿರ,
ಜಯಲಕ್ಷ್ಮಿಪುರಂ, ಮೈಸೂರು-12.
ಫೋನ್ : 0821/516771



**-ಸಂಪರ್ಕಿಸುವ ವಿಳಾಸ-**

**ಮಣಿ ನಂಗಾರ್**
C/o ನಂಗಾರ್ ಆಡಿಯೋ & ವೀಡಿಯೋ
ಹೊಳ್ಳ ಕಾಂಪ್ಲೆಕ್ಸ್, ಮಂಗಳೂರು ರಸ್ತೆ,
ಚಿಕ್ಕಪೇಟೆ, ಮಡಿಕೇರಿ-571 201
ದೂರವಾಣಿ : 08272/29372

**ಬೈತಡ್ಕ ಜಾನಕಿ ಬೆಳ್ಯಪ್ಪ**
ನಂ. 16, ಎಲ್.ಐ.ಸಿ. ಹತ್ತಿರ
ರೇಸ್ ಕೋರ್ಸ್ ರಸ್ತೆ, ಮಡಿಕೇರಿ
ದೂರವಾಣಿ : 08272/28047

**ಕುಂಭಗೌಡನ ಸೋಮಣ್ಣ**
ಮಯೂರ ಕೋಲ್ಡ್ ಸ್ಟೋರೇಜ್
ಮುಖ್ಯ ರಸ್ತೆ, ಕುಶಾಲನಗರ-571237

**ಅಮ್ಮಾಜೀರ ಪೊನ್ನಪ್ಪ ಅಥವಾ**
**ಕಲ್ಲುಮುಟ್ಲು ಬಸಪ್ಪ**
20, 1ನೇ ಮೈನ್, 4ನೇ ಕ್ರಾಸ್
ಸಾಕಮ್ಮ ಗಾರ್ಡನ್, ಬಸವನಗುಡಿ,
ಬೆಂಗಳೂರು-04
ದೂರವಾಣಿ-080/6549669


## ಒಳನೋಟ

**ಪುಟಗಳು**



## ಅರೆ ಭಾಷಿಕ ವಿಭಾಗ




**ಚಂದಾ ವಿವರ**

| | | |
|---|---|---|
| ಬಿಡಿ ಪ್ರತಿ | : | 5 ರೂ. |
| ಅರ್ಧ ವಾರ್ಷಿಕ | : | 60 ರೂ. |
| ವಾರ್ಷಿಕ ಚಂದಾ | : | 120 ರೂ. |

# ಸಂಪಾದಕೀಯ :

## ಧರ್ಮದಲ್ಲಿ ವಿಜ್ಞಾನ

ನಮ್ಮ ಹಿರಿಯರು ವಿಜ್ಞಾನವನ್ನು ನೇರವಾಗಿ ಸಾಮಾನ್ಯ ಜನರಿಗೆ ತಿಳಿ ಹೇಳಲಿಲ್ಲ. ಬದಲಾಗಿ ವಿಜ್ಞಾನಕ್ಕೆ ಧರ್ಮದ ಲೇಪನ ಕೊಟ್ಟು ತಿಳಿ ಹೇಳಿದ್ದಾರೆ. ಉದಾಹರಣೆಗೆ ನಮ್ಮ ಮನೆಯ ಮುಂದೆ ನೆಡುತ್ತಿರುವ ತುಳಸಿ ಮಲೇರಿಯಾ ನಿವಾರಣ ಗಿಡ ಮೂಲಿಕೆ. ತುಳಸಿ ಇದ್ದಲ್ಲಿ ಮಲೇರಿಯಾ ನೊಣಕ್ಕೆ ಮಾರಕವಲ್ಲದೆ ವಿವಿಧ ಸೋಂಕು ಖಾಯಿಲೆಗಳಿಗೆ ದಿವ್ಯ ಔಷಧಿ ಆದುದರಿಂದ ನಮ್ಮ ಹಿರಿಯರು ತುಳಸಿಯನ್ನು ದೇವ ಲೋಕದ ವೃಕ್ಷವೆಂದು ಅದಕ್ಕೆ ಪ್ರತ್ಯೇಕ ಕಟ್ಟೆ ಕಟ್ಟಿ ಪೂಜಿಸುತ್ತಾರೆ. ಅದರ ಎಲೆಗಳಲ್ಲಿ ಮಾಲೆಯನ್ನು ಮಾಡಿ ದೇವರ ವಿಗ್ರಹಗಳಿಗೆ ಮುಡಿಸುತ್ತಾರೆ. ಅದೇ ರೀತಿ ಮನೆಯೊಳಗೆ ಪಾದರಕ್ಷೆಗಳನ್ನು ಹಾಕಿಕೊಂಡು ಬರಬಾರದೆನ್ನುವ ಕಟ್ಟಳೆ ವೈಜ್ಞಾನಿಕವಾಗಿ ನೇರವಾಗಿ ಹೇಳುವ ಬದಲು ಸಾಮಾನ್ಯ ಜನರ ಮನಸ್ಸಿಗೆ ನುಗ್ಗಲು ಮನೆಯಲ್ಲಿ ದೇವರ ಮುಡುಪು ಇರುವುದರಿಂದ ಪಾದರಕ್ಷೆಯನ್ನು ಮನೆಯ ಹೊರಗಡೆನೇ ಬಿಟ್ಟು ಬರಬೇಕು. ಇಲ್ಲದಿದ್ದರೆ ದೇವರಿಗೆ ಕೋಪ ಬಂದು ಯಾವುದಾದರೂ ತೊಂದರೆ ಕೊಡುತ್ತದೆ ಎಂಬ ಭಯದಿಂದ ಹಿಂದೆ ಪಾದರಕ್ಷೆಗಳನ್ನು ಮನೆಯ ಅಂಗಳದಲ್ಲಿಯೇ ಬಿಟ್ಟು ಬರುತ್ತಿದ್ದರು. ಆದರೆ ಈಗೀಗ ಪಾಶ್ಚಾತ್ಯರ ಪ್ರಭಾವದಿಂದಾಗಿ ಅಡಿಗೆ ಮನೆಗೂ ಚಪ್ಪಲಿ, ಶೂ ಹಾಕುತ್ತಿದ್ದು, ಊಟ ಮಾಡುವಾಗಲೂ ಸಹ ಹಾಕಿಕೊಂಡು ಊಟ ಮಾಡುತ್ತಾರೆ. ಕೇಳಿದರೆ ನಮಗೆ ಆ ಕಟ್ಟೇನೂ ಇಲ್ಲವೆಂಬುದಾಗಿ ತಮ್ಮ ಆಧುನಿಕ ಒಣ ಜಂಭವನ್ನು ತೋರಿಸುತ್ತಾರೆ. ಕೆರೆಯ ಏರಿಯ ಮೇಲೆ ನೀರು ಹರಿಯುವ ತೋರೆಗಳ ಮೇಲ್ಭಾಗದಲ್ಲಿ ಎಂ. ಟಿ. ಮಲೇರಿಯಾದ ಸೊಳ್ಳೆಗಳು ವಾಸವಾಗಿರುವುದರಿಂದ ಬಿಸಿಲಿನ ಬೇಗೆಗೆ ಆ ಸ್ಥಳಕ್ಕೆ ಹೋಗಬಾರದೆಂಬ ಕಟ್ಟಳೆಯನ್ನು ನೇರವಾಗಿ ಹೇಳದೆ ಅಲ್ಲಿ ಆ ಸಮಯದಲ್ಲಿ ಚಾಮುಂಡಿ, ಗುಳಿಗ ಮುಂತಾದ ದೈವಗಳ ಸಂಚಾರ ಇದೆ. ಅಲ್ಲಿಗೆ ಹೋಗಬೇಡಿ ಎಂದು ಹಿರಿಯರು ಕಿರಿಯರಿಗೆ ಹೇಳಿ ಮಕ್ಕಳು ಆ ಸ್ಥಳಕ್ಕೆ ಹೋಗದಂತೆ ಎಚ್ಚರಿಸುತ್ತಾರೆ. ಎಂ. ಟಿ. ಮಲೇರಿಯಾ ಸೊಳ್ಳೆಗಳು ಕಡಿದರೆ ಮನುಷ್ಯನ ಮೈಮೇಲೆ ಸುಟ್ಟ ಬಾಳೆಕಾಯಿ ಯಂತಾಗಿ 48 ಗಂಟೆಯೊಳಗೆ ಮನುಷ್ಯ ಸಾಯುತ್ತಾನೆ. ಅದಕ್ಕೆ ನಮ್ಮ ಹಿರಿಯರು ಗುಳಿಗನ ಪೆಟ್ಟಿನಿಂದ ಆಯಿತೆಂದು ಹೇಳುತ್ತಿದ್ದರು. ಇದೇ ರೀತಿ ನಮ್ಮ ಜೀವನದ ಪ್ರತಿಯೊಂದು ಹಂತದಲ್ಲೂ ವಿಜ್ಞಾನವನ್ನು ಧರ್ಮದ ಲೇಪ ಲೇಪಿಸಿ ಜನರ ಮನಸ್ಸಿಗೆ ನಾಟುವಂತೆ ತಿಳಿಸಿದ್ದಾರೆ. ಕೆಲವು ವಿಷಯಗಳಿಗೆ ಮೂಢನಂಬಿಕೆಗಳಿದ್ದರೂ ಹಿಂದೂ ಧರ್ಮವು ವೈಜ್ಞಾನಿಕ ಆಚಾರ ವಿಚಾರ, ಕಟ್ಟು ಕಟ್ಟಳೆಗಳ ಬಗ್ಗೆ ನಿರ್ದೇಶನ ಕೊಟ್ಟದೆ. ನಮ್ಮ ಧರ್ಮವು ನಮ್ಮ ಜೀವನದಲ್ಲಿ ಹಾಸು ಹೊಕ್ಕಾಗಿ ಇರುವುದರಿಂದ ನಮ್ಮ ಸಂಸ್ಕೃತಿ, ನಮ್ಮ ಧರ್ಮವನ್ನು ಯಾರೇ ಯಾವ ರೀತಿಯಲ್ಲೂ ನಾಶ ಮಾಡಲು ಪ್ರಯತ್ನಿಸಿದರೂ ಸಾಧ್ಯವಾಗದೆ ನಿರಂತರ ಹರಿಯುವ ನದಿಯಂತಿದೆ.

ಈ ರೀತಿ ಇರುವ ನಮ್ಮ ಸಂಸ್ಕೃತಿಯನ್ನು ಮುಂದಿನ ಪೀಳಿಗೆಯೂ ಸಹ ಕಾಪಾಡಿಕೊಂಡು ಬರಲೆಂದು ಸಂಗಾತಿಯ ಅಭಿಲಾಷೆ. ●

## ಮರು ಆಯ್ಕೆ

ದಿನಾಂಕ 15–1–99 ರಂದು ಕೊಡಗು ಗೌಡ ಸಾಂಸ್ಕೃತಿಕ ಅಕಾಡೆಮಿ, ಮಡಿಕೇರಿಯಲ್ಲಿ ನಡೆದ ಅಕಾಡೆಮಿಯ ಕಾರ್ಯಕಾರಿಣಿ ಸಭೆಯಲ್ಲಿ ಮುಂದಿನ ಸಾಲಿಗೆ ಅಧ್ಯಕ್ಷರಾಗಿ ಶ್ರೀ ತುಂತಜೆ ಗಣೇಶ್‌ರವರು ಅವಿರೋಧವಾಗಿ ಮರು ಆಯ್ಕೆಗೊಂಡರು. ಈ ಹಿಂದೆ 25–12–98ರಲ್ಲಿ ನಡೆದ ಸಾಮಾನ್ಯ ವಾರ್ಷಿಕ ಸಭೆಯಲ್ಲಿ 25 ಮಂದಿ ನಿರ್ದೇಶಕರನ್ನು 6 ಮಂದಿ ಖಾಯಂ ಆಹ್ವಾನಿತರನ್ನಾಗಿ ಚುನಾಯಿಸಲಾಗಿತ್ತು ಹಾಗೂ ಸಾಕಷ್ಟು ಚರ್ಚಿಸಿ ಈಗಿನ ಹಾಲಿ ಅಧ್ಯಕ್ಷರೇ ಮುಂದುವರಿಯುವಂತೆ ಒಕ್ಕೊರಳಿನಿಂದ ತೀರ್ಮಾನಿಸಿ ಈ ಕೆಳಗಿನ ಪದಾಧಿಕಾರಿಗಳನ್ನು ಮುಂದಿನ ಸಾಲಿಗೆ ಆರಿಸಲಾಯಿತು. ಅಧ್ಯಕ್ಷರಾಗಿ ತುಂತಜೆ ಗಣೇಶ್, ಉಪಾಧ್ಯಕ್ಷರಾಗಿ ಗುಡ್ಡೆಮನೆ ರಮೇಶ್, ಹುದೇರಿ ನಾಗೇಶ್, ಮತ್ತು ನೈಯ್ಯಣೀರ ಹೇಮಲತ ತಾರೇಂದ್ರನವರು, ಪ್ರಧಾನ ಕಾರ್ಯದರ್ಶಿಯಾಗಿ ಕೋಡಿ ಚಂದ್ರಶೇಖರ್, ಕಾರ್ಯದರ್ಶಿಯಾಗಿ ಕುದುಕುಳಿ ಭರತ್ ಮತ್ತು ಪೊನ್ನೇಟಿ ಶಾಂತಿ ಪೊನ್ನಪ್ಪನವರು, ಖಜಾಂಚಿಯಾಗಿ ನಂಗಾರು ಮುತ್ತಪ್ಪನವರನ್ನು, ಕಾರ್ಯಕಾರಿ ಮಂಡಳಿ ಸದಸ್ಯರಾಗಿ ಕೊಂಪುಳಿರ ಗಣೇಶ್, ಕುದುಕುಳಿ ಸುಬ್ಬಯ್ಯ, ಕುಕ್ಕುನೂರು ಸೋಮಣ್ಣ ಇವರುಗಳು ಆಯ್ಕೆಯಾದರು. ಅಂದಿನ ಸಭೆಯ ಅಧ್ಯಕ್ಷತೆಯನ್ನು ಅಕಾಡೆಮಿಯ ಗೌರವ ಅಧ್ಯಕ್ಷರಾದ ಶ್ರೀ ಕೆ. ಕೆ. ಪೂರ್ಣಯ್ಯನವರು ಯಶಸ್ವಿಯಾಗಿ ನಡೆಸಿಕೊಟ್ಟರು.

ಸಭೆಯಲ್ಲಿ ವಿದ್ಯಾಸಂಘದ ಉಪಾಧ್ಯಕ್ಷರಾದ ಪಂಜಿಪಳ್ಳ ವೆಂಕಪ್ಪ, ವಿದ್ಯಾಸಂಘದ ಗೌರವ ಕಾರ್ಯದರ್ಶಿ ಕೋಳುಮುಡಿಯನ ಅನಂತ್‌ಕುಮಾರ್, ಪತ್ರಿಕಾ ಪ್ರತಿನಿಧಿಯಾಗಿ ಪಟ್ಟಡ ಪ್ರಭಾಕರರವರು ಉಪಸ್ಥಿತರಿದ್ದರು.

# ರಾಷ್ಟ್ರಮಟ್ಟದ ಬಾಸ್ಕೆಟ್ ಬಾಲ್ ಕ್ರೀಡಾಪಟು

ರಾಷ್ಟ್ರ ಮಟ್ಟದಲ್ಲಿ ಬಾಸ್ಕೆಟ್ ಬಾಲ್ ಕ್ರೀಡೆಗೆ ಕರ್ನಾಟಕದಿಂದ 12 ಮಂದಿ ಕ್ರೀಡಾ ಪಟುಗಳು ಆಯ್ಕೆಯಾದರು. ಮೊದಲ ಐದು ಮಂದಿ ಆಟಗಾರರಲ್ಲಿ ಕೆ. ಜಿ. ಪ್ರಣಾವ್ ಒಬ್ಬ. ಈ ಸಂದರ್ಭದಲ್ಲಿ ಪ್ರಣಾವ್‌ನನ್ನು ಸಂದರ್ಶಿಸಲಾಯಿತು.

* ನಿನ್ನ ಮನೆಯವರನ್ನು ಪರಿಚಯಿಸುತ್ತೀಯ ?

ನನ್ನ ತಂದೆ ಕಟ್ಟೆಮನೆ ಗಣೇಶ್, ತಾಯಿ ಪ್ರೇಮ, ತಮ್ಮ ಪ್ರಧಾನ್. ನಮ್ಮ ಮನೆ ಮಡಿಕೇರಿ ತಾಲ್ಲೂಕಿನ ಮರಗೋಡಿನಲ್ಲಿದೆ.

* ನೀನು ಜನಿಸಿದ್ದು ಯಾವಾಗ ?

22-5-1983 ರಲ್ಲಿ.

* ನೀನು ವ್ಯಾಸಂಗ ಮಾಡಿದ್ದು ಎಲ್ಲೆಲ್ಲಿ ? ಯಾವ ಮಾಧ್ಯಮದಲ್ಲಿ ?

ನಾನು 7ನೇ ತರಗತಿಯವರೆಗೆ ಮಡಿಕೇರಿಯ ಕೊಡಗು ವಿದ್ಯಾಲಯದಲ್ಲಿ ವ್ಯಾಸಂಗ ಮಾಡಿದೆ. ಈಗ ನಾನು ಪ್ರೌಢ ವಿದ್ಯಾಭ್ಯಾಸಕ್ಕೆ ಚಿಕ್ಕಮಗಳೂರಿನ ಶ್ರೀ ಪೂರ್ಣ .ಪ್ರಜ್ಞಾ ವಿದ್ಯಾಲಯದಲ್ಲಿ ಪ್ರವೇಶ ಪಡೆದೆ. ಈಗ 10ನೇ ತರಗತಿಯಲ್ಲಿ ಓದುತ್ತಾ ಇದ್ದೇನೆ. ಇಲ್ಲಿಯವರೆಗೂ ನಾನು ವ್ಯಾಸಂಗ ಮಾಡಿದ್ದು ಆಂಗ್ಲ ಮಾಧ್ಯಮದಲ್ಲೇ.

* ನೀನು ಯಾವೆಲ್ಲ ಆಟಗಳನ್ನು ಆಡುತ್ತೀಯ ?

ಬಾಸ್ಕೆಟ್ ಬಾಲ್, ವಾಲಿಬಾಲ್, ಕ್ರಿಕೆಟ್, ಟೇಬಲ್ ಟೆನ್ನೀಸ್, ಶಟಲ್ ಬ್ಯಾಡ್ಮಿಂಟನ್ ಮತ್ತೆ ಚೆಸ್.

* ನಿನಗೆ ಅತ್ಯಂತ ಇಷ್ಟವಾದ ಕ್ರೀಡೆ ಯಾವುದು ?

ಬಾಸ್ಕೆಟ್ ಬಾಲ್ ಮತ್ತು ವಾಲಿಬಾಲ್. ಇದರಲ್ಲಿ ಬಾಸ್ಕೆಟ್ ಬಾಲ್ ಆಟಕ್ಕೆ ಮೊದಲ ಆದ್ಯತೆ. ಆದರೂ ವಾಲಿ ಬಾಲ್ ಕ್ರೀಡೆಯಲ್ಲಿ ರಾಜ್ಯ ಮಟ್ಟದ ಪಂದ್ಯದಲ್ಲಿ ಭಾಗವಹಿಸಿದ್ದೇನೆ.

* ನಿನಗೆ ಬಾಸ್ಕೆಟ್ ಬಾಲ್ ಆಟವೇ ಅತ್ಯಂತ ಇಷ್ಟವಾಗಲೇನು ಕಾರಣ ?

ಒಮ್ಮೆ ನಮ್ಮ ಪೂರ್ಣ ಪ್ರಜ್ಞಾ ಹೈಸ್ಕೂಲ್‌ನಲ್ಲಿ 'ಹೌಸ್ ವೈಸ್' ಕ್ರೀಡಾಕೂಟ ಜರುಗಿತು. ನನಗೆ ಬಾಸ್ಕೆಟ್ ಬಾಲ್ ಆಟದಲ್ಲಿ ಅಷ್ಟೇನೂ ಆಸಕ್ತಿ ಇರಲಿಲ್ಲ. ಅಂತೂ ನೋಡೋಣ ಎಂದು ನಾನು ಆಡಲು ಸೇರಿದೆ. ನಾನೇ ಆ ಆಟಗಾರರಲ್ಲಿ 'ವೀಕೆಸ್ಟ್' ಆಗಿದ್ದೆ. ಹಾಗೂ ಹೀಗೂ ಮತ್ತೆ ಮತ್ತೆ ಗೆಲುವಿನ ಮೇಲೆ ಗೆಲುವು ಸಿಗ್ತಾನೇ ಹೋಯಿತು. ತಾಲ್ಲೂಕು ಮಟ್ಟಕ್ಕೂ ಹೋದೆವು. ಅಲ್ಲೂ ಗೆದ್ದೆವು. ಜಿಲ್ಲಾ ಮಟ್ಟಕ್ಕೂ ಹೋದೆವು ಅಲ್ಲೂ ನಮಗೆ ಜಯ ದೊರಕಿತು. ಇಷ್ಟೊತ್ತಿಗೆ ನಾನೊಬ್ಬ ಒಳ್ಳೆಯ ಆಟಗಾರನೆಂದು ಗುರುಗಳು ಬೆನ್ನು ತಟ್ಟಿದರು. 'ವೀಕೆಸ್ಟ್' ಆಗಿದ್ದ ನಾನು 'ಹೈಯಸ್ಟ್' ಆದೆ. ನಂತರ ನನ್ನ ತಂಡದ ನಾಯಕನೂ ಆಗಿಬಿಟ್ಟೆ.

* ರಾಷ್ಟ್ರ ಮಟ್ಟದ ಕ್ರೀಡೆಗೆ ಆಯ್ಕೆ ಮಾಡಿದ್ದೆಲ್ಲಿ ? ಹೇಗೆ ?

ಗುಲ್ಬರ್ಗಾದಲ್ಲಿ ಆಯ್ಕೆ ನಡೆಯಿತು. 17 ವರ್ಷದ ಒಳಗಿನವರನ್ನೇ ಆಯ್ಕೆ ಮಾಡಿದರು.

* ಈ ಆಟದಲ್ಲಿ ನಿನ್ನ ಸ್ಥಾನ ಯಾವುದು ?

ನಾನು ಪಿವೋಟಿಂಗ್ ಪ್ಲೇಯರ್

* ರಾಷ್ಟ್ರಮಟ್ಟದ ಕ್ರೀಡಾಕೂಟ ಎಲ್ಲಿ ಜರುಗಿತು ? ಯಾವಾಗ ? ಅಲ್ಲಿ ಸ್ಥಾನ ?

ಚಂಡಿಗರ್‌ನಲ್ಲಿ ಸ್ಪರ್ಧೆ ನಡೆಯಿತು. 1998ರ ನವೆಂಬರ್ 14 ರಿಂದ 19ರವರೆಗೆ ನಡೆದ ಈ ಸ್ಪರ್ಧೆಯಲ್ಲಿ ಕೇರಳ ಮತ್ತು ಮಧ್ಯಪ್ರದೇಶ ರಾಜ್ಯಗಳ ಜೊತೆ ಆಡಿ ಸೋತೆವು. ತಮಿಳುನಾಡಿನ ಜೊತೆ ಆಡಿ ಗೆದ್ದೆವು.

* ನಿಮ್ಮದು ಪೂರ್ಣ ಗೆಲುವು ಆಗದಿರಲು ಕಾರಣ ವೇನು ?

ನಮ್ಮ ತಂಡದಲ್ಲಿ ಹೊಂದಾಣಿಕೆಯ ಕೊರತೆ ಇತ್ತು. ಬೇರೆ ಬೇರೆ ಜಿಲ್ಲೆಯಿಂದ ಆಯ್ಕೆಯಾಗಿ ಬಂದ ಆಟಗಾರರು ಯಾವ ಯಾವ ಸ್ಥಳದಲ್ಲಿ ಆಡಬೇಕೆಂಬುದರ ಬಗ್ಗೆ ಸೂಕ್ತ ತರಬೇತು ಸಿಗದೆ ನೇರ ಆಟಕ್ಕಿಳಿದೆವು. ಇದರಿಂದ ಸೋಲ ಬೇಕಾಯಿತು.

* ಅಂದರೆ ಆಟಕ್ಕಿಂತ ಮುನ್ನ ತರಬೇತಿ ಬೇಕೆ ಬೇಕೆನು ?

ಹೌದು. ಖಂಡಿತವಾಗಿ ತರಬೇತಿ ಬೇಕೇ ಬೇಕು.

* ನಮ್ಮ ರಾಜ್ಯ ತಂಡದ ನಾಯಕತ್ವವನ್ನು ವಹಿಸಿದವರು ಯಾರು ?

ಚಂದ್ರಮೌಳಿ ಮ್ಯಾನೇಜರ್, ತಾಂಡವಮೂರ್ತಿ ಜನರಲ್ ಮ್ಯಾನೇಜರ್ ಆಗಿದ್ರು.

* ಚಂಡಿಗರ್‌ನಲ್ಲಿ ಎಷ್ಟು ದಿನ ಇದ್ದೀರಿ ? ಅಲ್ಲಿಯ ಬಗ್ಗೆ ಹೇಳ್ತೀಯ ?

ಚಂಡಿಗರ್‌ನಲ್ಲಿ 5 ದಿನಗಳಿದ್ದೆವು. ಅಲ್ಲಿಯ ಸಿಟಿ ತುಂಬಾ ಚೆನ್ನಾಗಿದೆ. ಆ ಸಿಟಿಯಲ್ಲಿ ವಿಳಾಸ ಹುಡುಕುವುದು ತುಂಬಾ ಸುಲಭ. ಅಲ್ಲಿ ಸೈಕಲ್ ರಿಕ್ಷಾಗಳೇ ಹೆಚ್ಚು.

* ನಿನ್ನ ಇತರ ಹವ್ಯಾಸಗಳೇನು ?

ಫೋಟೋ ಗ್ರಾಫಿ, ಫಿಶಿಂಗ್, ಶೂಟಿಂಗ್, ಕಾಮಿಕ್ಸ್ ಓದೋದು, ಖುಷ್‌ವಂತ್ ಸಿಂಗ್ ಜೋಕ್ಸ್ ಓದುವುದು. ಟ್ರೆಷರ್ ಐಲ್ಯಾಂಡ್, ಮೌಂಟ್ ಕ್ರಿಸ್ಟೋ, ಮೊಬಿಡಿಕ್ ಇತ್ಯಾದಿ ಕಾದಂಬರಿ ಓದಿದ್ದೇನೆ.

* ನಿನ್ನ ಈ ಎಲ್ಲಾ ಚಟುವಟಿಕೆಗಳಿಗೆ ನಿನ್ನ ತಂದೆ, ತಾಯಿಯರ ಪ್ರೋತ್ಸಾಹ ಹೇಗಿದೆ ?

ನನ್ನ ತಂದೆ ತಾಯಿ ನನಗೆ ಒಳ್ಳೆಯ ಪ್ರೋತ್ಸಾಹ ಕೊಡ್ತಿದ್ದಾರೆ. ತಂದೆ ಸಿ. ಪಿ. ಇಡಿ. ಓದಿದ್ದಾರೆ. ಅವರು ಒಳ್ಳೆ ಹಾಕಿ ಕ್ರೀಡಾಪಟು. ತಾಯಿ ಒಳ್ಳೆ ಅಥ್ಲೀಟ್. ಇದರಿಂದಾಗಿ ನನಗಂತೂ ಒಳ್ಳೆ ಛಾನ್ಸ್. ಬಿಡುವು ಸಿಕ್ಕುವಾಗ ನಾವೆಲ್ಲರೂ ಕೂಡಿಕೊಂಡು ಶಟಲ್ ಬ್ಯಾಡ್ಮಿಂಟನ್ ಆಡ್ತೇವೆ. ನನ್ನ ತಮ್ಮ ಪ್ರಧಾನ್‌ಗೆ ಸೈಕ್ಲಿಂಗ್, ಫಿಶಿಂಗ್ ಅಂದ್ರೆ ತುಂಬಾ ಇಷ್ಟ.

* ಆಟಗಾರರಿಗೆ ಕಿವಿ ಮಾತೇನು ?

ವ್ಯಾಯಾಮ ಬಹುಮುಖ್ಯ. ಆಟದಲ್ಲಿ ನಿಯಮಗಳನ್ನು ಪಾಲಿಸಲೇಬೇಕು. ಎದುರಾಳಿ ಆಟಗಾರರೂ ನಮ್ಮಂತೆಯೇ ಆಟಗಾರರೆಂದು ಗೆಳೆತನದಿಂದ ಕಾಣಬೇಕು. ಸೇಡಿನ ಭಾವನೆ ಬಿಟ್ಟವನೇ ಒಳ್ಳೆಯ ಆಟಗಾರ.

ಸಂದರ್ಶನದ ಕೊನೆಯಲ್ಲಿ ತಾನು ಪಡೆದ ಸರ್ಟಿಫಿಕೇಟ್‌ಗಳು, ಮೆಡಲ್‌ಗಳನ್ನೆಲ್ಲಾ ತೋರಿಸಿದ. ಕೊನೆಯದಾಗಿ ನೀನು ಮುಂದೇನಾಗಬೇಕೆಂದು ಬಯಸಿರುವೆ ಎಂದು ಕೇಳಿದಾಗ 'ಕಂಪ್ಯೂಟರ್ ಇಂಜಿನಿಯರ್' ಆಗಬೇಕೆಂಬ ಬಯಕೆಯನ್ನು ತಿಳಿಸಿದ.

ಪ್ರಣಾಮ್‌ನ ಬಯಕೆ ಈಡೇರಲಿ. ಆತ ಎಲ್ಲಾ ರಂಗದಲ್ಲೂ ಉಜ್ವಲ ತಾರೆಯಾಗಿ ಪ್ರಜ್ವಲಿಸಲೆಂದು ಹಾರೈಸೋಣ.

ಸಂದರ್ಶನ ಲೇಖನ : ಬಿ. ಆರ್. ಜೋಯಪ್ಪ, ಮದೆ.

## ಕುಶಾಲನಗರದಲ್ಲಿ ಗೌಡಬಾಂಧವರಿಂದ ಸಂತೋಷ ಕೂಟ

ದಿನಾಂಕ 14-2-1999ರ ಭಾನುವಾರ ಕುಶಾಲನಗರ ಗೌಡ ಸಮಾಜದಲ್ಲಿ ಸಂತೋಷ ಕೂಟ ಸಮಾರಂಭವನ್ನು ಏರ್ಪಡಿಸಲಾಗಿದೆ. ಸರ್ವ ಗೌಡ ಬಾಂಧವರು ಈ ಸಮಾರಂಭದಲ್ಲಿ ಪಾಲ್ಗೊಳ್ಳಬೇಕೆಂದು ಗೌಡ ಯುವಕ ಸಂಘದ ಅಧ್ಯಕ್ಷರಾದ ಕೆ. ಎಸ್. ಲೋಕೇಶ್‌ರವರು ಪ್ರಕಟಣೆಯಲ್ಲಿ ತಿಳಿಸಿದ್ದಾರೆ.

## ನಾಟಕ ಪ್ರದರ್ಶನ

ಕೊಡಗು ಗೌಡ ಸಾಂಸ್ಕೃತಿಕ ಅಕಾಡೆಮಿ [ರಿ.] ಮಡಿಕೇರಿ ಇವರ ಆಶ್ರಯದಲ್ಲಿ ಸ್ವಾತಂತ್ರ್ಯ ವೀರ ಗುಡ್ಡೆಮನೆ ಅಪ್ಪಯ್ಯ ಗೌಡ ಎಂಬ ಐತಿಹಾಸಿಕ ನಾಟಕವನ್ನು ದಿನಾಂಕ 29-1-99 ರಂದು ಬೆಳಿಗ್ಗೆ 10-30 ರಿಂದ ರಾತ್ರಿ 8 ಗಂಟೆವರೆಗೆ 2 ಪ್ರದರ್ಶನಗಳನ್ನು ಮಡಿಕೇರಿಯ ಕೆಳಗಿನ ಗೌಡ ಸಮಾಜದಲ್ಲಿ ತುಮಕೂರಿನ ಖ್ಯಾತ ನಾಟಕಕಾರು ಅಭಿನಯಿಸಿದರು.

## ಜೀವನ

ನಾವು ಅಂದುಕೊಂಡ ಹಾಗೆಯೇ
ನಡೆಯುವುದಿಲ್ಲ ನಮ್ಮ ಜೀವನ
ಹಾಗೆಯೇ ನಡೆದರೆ ನಾ ಹೇಳುವೆ
ಆ ಜೀವನಕ್ಕೆ ನಮನ.

ಒಮ್ಮೊಮ್ಮೆ ಬರುವುದು ಸುಖ, ಆದರೆ
ಸುಖದ ಹಿಂದೆಯೇ ಇರುವುದು ದುಃಖ
ನಮ್ಮ ಜೀವನದಲ್ಲಿರುತ್ತದೆ ಎಷ್ಟೋಷ್ಟೊ ಆಸೆ
ಆದರೆ ಒಮ್ಮೊಮ್ಮೆ ಆಗುವವು ಅವು ನಿರಾಸೆ.

ಆದರೂ ನಾವು ಧೃತಿಗೆಡಬಾರದು
ಸಾಧಿಸಬೇಕು ಏನನ್ನಾದರೂ
ಒಂದು ಗುರಿಯನ್ನಿಟ್ಟುಕೊಂಡು ಬದುಕಬೇಕು
ಅದನ್ನು ಸಾಧಿಸಿದ ನಂತರವೇ
ಹೇಳಬೇಕು ಈ ಲೋಕಕ್ಕೆ ನಮನ
ಅದುವೇ ನಮ್ಮ ಸಾರ್ಥಕದ ಜೀವನ.

—ಪಟ್ಟಡ ವಿಶಾಲಾಕ್ಷಿ, ಮಂಡ್ಯ

# ಗೌಡರ ವಿವಾಹ ಪದ್ಧತಿಗಳ ಅವಲೋಕನ

ಅದ್ವೈತ ತತ್ವದ ಪ್ರಕಾರ ಹತ್ತು ಕುಟುಂಬ ಹದಿನೆಂಟು ಗೋತ್ರದ ಜನರೆಲ್ಲರ ಆತ್ಮ ಒಂದೇ, ದೇಹಗಳು ಮಾತ್ರ ಬೇರೆ. ಈ ಸಿದ್ಧಾಂತ ಗೌಡರಲ್ಲಿ ವಿಶ್ವ ಭಾವನೆಯನ್ನು ಬೆಳೆಸಿಕೊಳ್ಳಲು ಸಹಾಯಕವಾಗಿದೆ. ಆದರೆ ಇದು ಈಗ ವಿವಾಹಗಳಲ್ಲಿ ಬರೀ ಬಾಯಿಮಾತಿನ ಹೇಳಿಕೆಯಾಗಿದೆಯೇ ಹೊರತು ಕಾರ್ಯರೂಪದಲ್ಲಿ ಬಹಳ ಕಮ್ಮಿ ಆಗುತ್ತಲಿದೆ.

ಹಿಂದೂ ಸಮಾಜದಲ್ಲಿ ಹಿಂದೂ ಕಾನೂನಿನ ಪ್ರಕಾರ ಎಂಟು ವಿಧದ ವಿವಾಹ ಪದ್ಧತಿಗಳಾಗಿ ವಿಂಗಡಿಸಲಾಗಿದೆ. ಇವುಗಳಾವುವೆಂದರೆ : 1. ಬ್ರಹ್ಮ 2. ದೈವ 3. ಸುರ 4. ಪ್ರಜಾಪತ್ಯ ಇವುಗಳು ಸ್ವೀಕೃತ ವಿಧದ ವಿವಾಹಗಳು 5. ಅಸುರ 6. ಗಾಂಧರ್ವ 7. ರಾಕ್ಷಸ 8. ಪೈಶಾಚ ಇವುಗಳು ಸ್ವೀಕೃತವಲ್ಲದ ವಿವಾಹಗಳು.

ಈಗ ಸಾಮಾನ್ಯವಾಗಿ ಮನ್ನಣೆ ಪಡೆದ ವಿವಾಹಗಳು :

1. ಬ್ರಹ್ಮ ರೀತಿಯ ವಿವಾಹವು ಸ್ವೀಕೃತವಾದದ್ದು.
2. ಅಸುರ ರೀತಿಯ ವಿವಾಹವು ಸ್ವೀಕೃತವಲ್ಲದ್ದು.

ವಧುವಿನ ತಂದೆ ಅಥವಾ ಆಕೆಯ ಪೋಷಕರು ಯಾವುದೇ ವಿಧದ ಹಣವನ್ನು ಪಡೆಯದೆ ಮಾಡುವ ವಿವಾಹಕ್ಕೆ ಬ್ರಹ್ಮ ರೀತಿಯ ವಿವಾಹವೆಂದು ಹೇಳುತ್ತಾರೆ. ವಧುವಿನ ತಂದೆ ಅಥವಾ

ಲೇಖಕರು : ಪ್ರೊ॥ ಪೂಜಾರಿ ಮೊಣ್ಣಪ್ಪ, ಬೆಂಗಳೂರು

ಪೋಷಕರು ಯಾವುದೇ ರೀತಿಯ ಹಣವನ್ನು [ಶುಲ್ಕ] ಪಡೆದು ವಧುವನ್ನು ವರನಿಗೆ ವಿವಾಹ ಮಾಡಿಕೊಟ್ಟರೆ ಅದನ್ನು ಅಸುರ ರೀತಿಯ ವಿವಾಹವೆಂದು ಕರೆಯುತ್ತಾರೆ. ಈ ರೀತಿಯ ಕ್ರಮವನ್ನು ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರರು ಆಚರಿಸುತ್ತಾರೆ.

ಗೌಡರಲ್ಲಿ ರೂ. 10-50ನ್ನು ತೆರವಿನ ಹಣವೆಂದು ವರನು ವಧುವಿನ ತಂದೆ ಅಥವಾ ಪೋಷಕರಿಗೆ ವಧುವಿನ ಮನೆಯ ಚಪ್ಪರದಡಿಯಲ್ಲಿ ಕೊಡುತ್ತಾರೆ. ಇದರಲ್ಲಿ ಶೃಂಗೇರಿ ಮಠಕ್ಕೆ ವಧುವಿನ ಮುತ್ತೈದೆತನಕ್ಕೆ ರೂ. 6-25, ಎಲೆ ಅಡಿಕೆ ಖರ್ಚು ರೂ. 0-50, ಹಾಲೆಮರ ಕಂಬಕ್ಕೆ ರೂ. 1-25, ಆರತಿಗಳಿಗೆ ರೂ. 1-25, ಹೀಗೆ ಒಟ್ಟು ರೂ. 10-50. ಆದ್ದರಿಂದ ಗೌಡರಲ್ಲಿ ವಧುವಿನ ತಂದೆ ಅಥವಾ ಪೋಷಕರು ಶುಲ್ಕದ ಹಣವನ್ನು ಪಡೆಯದೆ ಇರುವುದರಿಂದ ಗೌಡರ ಮದುವೆ ಬ್ರಹ್ಮ ರೀತಿಯ ವಿವಾಹ ಪದ್ಧತಿಯಾಗಿದೆ. ಕೆಲವರು ಬ್ರಾಹ್ಮಣ ಪುರೋಹಿತರಿಂದ ಧಾರೆ ಮುಹೂರ್ತವನ್ನು ಮತ್ತು ಸಪ್ತಪದಿಯನ್ನು ಪವಿತ್ರ ಅಗ್ನಿಯ ಮುಂದೆ ಇಡುವ ಶಾಸ್ತ್ರವನ್ನು ಆಚರಿಸುವರು. ಮತ್ತೆ ಕೆಲವರು ಧಾರಾ ಮುಹೂರ್ತವನ್ನು ಬ್ರಾಹ್ಮಣ ಪುರೋಹಿತರಿಲ್ಲದೆ ಮಾಡುವರು. ಈ ರೀತಿಯ ಧಾರೆಗೆ ತಂದೆ ತಾಯಿ ಧಾರೆ ಅಥವಾ ಬಂಟಧಾರೆ ಎಂದು ಹೇಳುವರು. ಇದಕ್ಕೆ ಕಾರಣ ಹಿಂದೆ ಅಂದರೆ 1809ರಲ್ಲಿ ಸುಳ್ಯ ಪ್ರದೇಶದಲ್ಲಿ ಮಳೆ ಬಂದು ನದಿಯಲ್ಲಿ ತುಂಬಾ ನೆರೆ ಬಂದು ನದಿಯ ಮತ್ತೊಂದು ಕಡೆಯಿಂದ ಬರಬೇಕಾದ ಬ್ರಾಹ್ಮಣ ಪುರೋಹಿತರು ಧಾರೆಯ ಸಮಯಕ್ಕೆ ಬಾರದೇ ಇದ್ದುದರಿಂದ ಅಲ್ಲಿ ನೆರೆದಿದ್ದ ಬಂಟರ ಮುಖ್ಯಸ್ಥರೊಬ್ಬರು ಬ್ರಾಹ್ಮಣ ಬಾರದೇ ಇರುವ ವಿಷಯಕ್ಕೆ ಕೋಪಗೊಂಡು "ಬ್ರಾಣೆದಾಯಿತ ಬ್ರಾಣೆ ಅಪ್ಪೆ ಅಮ್ಮ ಧಾರೆ ಮಯಿಪುಲೆ" ಎಂದು ಅಧಿಕಾರವಾಣಿಯಿಂದ ಹೇಳಿ ತಂದೆ ತಾಯಿಯಿಂದ ಮಾಡಿಸಿದರು. ಅನಂತರ ಇದಕ್ಕೆ "ಬಂಟ್ರಧಾರೆ" ಎಂಬ ಹೆಸರಾಯಿತು. ಆದರೆ ಈ ವಿಚಾರವನ್ನು ತಿಳಿದ ಶೃಂಗೇರಿ ಜಗದ್ಗುರುಗಳು ಈ ರೀತಿ ಪದ್ಧತಿಗೆ ವಿರುದ್ಧವಾಗಿ ಹೋದ ಸುಳ್ಯ ಸೀಮೆಯ ಗೌಡರನ್ನು ಅಮರ ಸೀಮೆಯ ಗೌಡರು ಬಹಿಷ್ಕರಿಸಬೇಕೆಂದು ಅಪ್ಪಣೆ ಮಾಡಿದರೆಂದು, ಈ ವಿಷಯವನ್ನು ಆಗಿನ ಕೊಡಗಿನ ರಾಜನಾಗಿದ್ದ ಲಿಂಗರಾಜೇಂದ್ರ ಒಡೆಯರ ಆಸ್ಥಾನಕ್ಕೆ ಗೌಡರ ಮುಖಂಡರು ಹೋಗಿ ತಮ್ಮ ಅಹವಾಲನ್ನು ಅರಿಕೆ ಮಾಡಿಕೊಂಡು ಅರಮನೆಯಲ್ಲಿದ್ದ ನಾಲ್ಕು ನಿರೂಪಗಳನ್ನು ಅಜಮಾಯಿಸಿ ನೋಡಿದಲ್ಲು ಶೃಂಗೇರಿ ಮಠಕ್ಕೆ ಗುರುಕಾಣಿಕೆ ಕೊಡಬೇಕಾಗಿಲ್ಲವೆಂಬುದಾಗಿ ಅಪ್ಪಣೆ ಕೊಡಿಸಿದರು. ಆದರೆ 1910-13ರಲ್ಲಿ ಗೌಡರ ಸಂಪ್ರದಾಯದ ನಡವಳಿಕೆಗಳು ಸರಿಯಾಗಿ ನಡೆಯುತ್ತಿರದ ಕಾರಣ ಜಾತಿ ಬಾಂಧವರು ತಮ್ಮ ಸ್ವಜಾತಿ ನೀತಿಯನ್ನು ಎಲ್ಲಾ ಕಡೆ ಒಂದೇ ರೀತಿಯಲ್ಲಿ ನಡೆಸಿಕೊಂಡು ಬರಬೇಕೆಂದು ಶೃಂಗೇರಿ ಸಂಸ್ಥಾನದ ಮಹಾಶಿವಸ್ವಾಮಿಗಳವರು ಪ್ರಾತಃಕಾಲದಲ್ಲಿ ನಿರೂಪವನ್ನು ಕೊಟ್ಟರು. ಆದರೆ ಇದರ ಪ್ರಕಾರ ಕೆಲವರು ನಡೆದುಕೊಳ್ಳುತ್ತಾರೆ. ಇನ್ನು ಕೆಲವರು ತಮ್ಮದೇ ಆದ ರೀತಿಯಲ್ಲಿ ವಿವಾಹ ಪದ್ಧತಿಗಳನ್ನು ಆಚರಿಸುತ್ತಾರೆ.

ಹಳೆಯ ಪದ್ಧತಿಗಳು ಹೊಸ ಸಮಾಜಕ್ಕೆ ಕೆಲವು ಸಲ ಸರಿಹೊಂದದಿದ್ದರೂ ಪದ್ಧತಿಗಳನ್ನು ಪೂರ್ಣವಾಗಿ ಬಿಡುವುದರಿಂದ ನಮ್ಮ ಸಂಸ್ಕೃತಿಯನ್ನು ಪೂರ್ಣವಾಗಿ ಮರೆತಂತೆ. ದ.ಕ. ಮತ್ತು ಕೊಡಗು ಜಿಲ್ಲೆಗಳಲ್ಲಿ ನೆಲೆಸಿದ ಗೌಡರ ವಿವಾಹ ಪದ್ಧತಿಗಳು ಹಿಂದೂ ಸಮಾಜದಲ್ಲಿ ಕಂಡುಬರುವ ಸಾಮಾನ್ಯ

ಎಲ್ಲಾ ಜಾತಿಗಳಲ್ಲಿರುವಂತೆ ಧರ್ಮ ಶಾಸ್ತ್ರಗಳನ್ವಯ ರೂಢಿ ಮಾಡಿಕೊಂಡಿದ್ದಾರೆ. ಈ ರೀತಿಯ ನಿಯಮಗಳಿಗೆ ಶ್ರೀ ಶೃಂಗೇರಿ ಮಠದ ಮಾರ್ಗದರ್ಶನವೇ ಮೂಲ ಕಾರಣ. ದ.ಕ. ಮತ್ತು ಕೊಡಗು ಇಲ್ಲಿಗೆ ಬಂದು ನೆಲೆಸುವುದಕ್ಕೆ ಮೊದಲು ವಿಜಯ ನಗರದ ಈಗಿನ ಹಂಪೆಯ ಸುತ್ತ ಮುತ್ತ ವಾಸವಾಗಿದ್ದು, ಅಲ್ಲಿದ್ದ ಶ್ರೀ ವಿದ್ಯಾರಣ್ಯರ ಪ್ರಭಾವದಿಂದಾಗಿ ಶ್ರೀ ಶೃಂಗೇರಿ ಜಗದ್ಗುರುಗಳ ಸಂಪರ್ಕ ಬೆಳೆದು ಶ್ರೀ ಶೃಂಗೇರಿ ಜಗದ್ಗುರುಗಳು ಈ ಗೌಡರ ಗುರುಗಳಾದರು. ಆದಿ ಶಂಕರಾಚಾರ್ಯರು ಸ್ಥಾಪಿಸಿದ ಅದ್ವೈತ ಮತದ ಆಧಾರದ ಮೇಲೆ ನಮ್ಮ ಜಾತಿ ಪದ್ಧತಿಯನ್ನು ಅಳವಡಿಸಿಕೊಂಡಂತೆ ಕಾಣುತ್ತದೆ. ಅದ್ವೈತ ಮತದ ಪ್ರಕಾರ "ಬ್ರಹ್ಮನೇ ನಿಜವಾದ ವಸ್ತು ಎಂಬ ಅರ್ಥ ವನ್ನು ಸೂಚಿಸುತ್ತದೆ. ಈ ಪ್ರಕಾರ ಶುಭಕಾರ್ಯವನ್ನು ಹತ್ತು ಕುಟುಂಬ ಹದಿನೆಂಟು ಗೋತ್ರದ ದೇವಸಭೆಯನ್ನು ಕೇಳಿ ಪ್ರಾರಂಭಿಸುತ್ತಾರೆ. ಇದರ ಅರ್ಥ ವಧು ಅಥವಾ ವರನು ತಂದೆ ತಾಯಿಗಳಿಗೆ ಮಾತ್ರ ಮಕ್ಕಳಲ್ಲದೆ ಇಡೀ ಹತ್ತು ಕುಟುಂಬ ಹದಿನೆಂಟು ಗೋತ್ರದ ಜನರಿಗೆಲ್ಲರಿಗೂ ಸೇರಿದ ಮಗು. ಅಲ್ಲದೆ ಅಲ್ಲಿ ಸೇರಿದ ಸಭೆಯು ದೇವಸಭೆಗೆ ಸಮಾನ. ವಧು-ವರರ ತಂದೆ ತಾಯಿಯರು ಹತ್ತು ಕುಟುಂಬ ಹದಿನೆಂಟು ಗೋತ್ರ ದವರನ್ನು ಕೇಳಿಯೇ ಎಲ್ಲಾ ಕಾರ್ಯಗಳನ್ನು ನೆರವೇರಿಸಬೇಕೆಂಬ ಭಾವನೆ ಬರುತ್ತದೆ. ಅದ್ವೈತ ತತ್ವದ ಪ್ರಕಾರ ಹತ್ತು ಕುಟುಂಬ ಹದಿನೆಂಟು ಗೋತ್ರದ ಜನರೆಲ್ಲರ ಆತ್ಮ ಒಂದೇ, ದೇಹ ಗಳು ಮಾತ್ರ ಬೇರೆ. ಈ ಸಿದ್ಧಾಂತ ಗೌಡರಲ್ಲಿ ವಿಶ್ವ ಭಾತೃ ಭಾವನೆಯನ್ನು ಬೆಳೆಸಿಕೊಳ್ಳಲು ಸಹಾಯಕವಾಗಿದೆ. ಆದರೆ ಇದು ಈಗ ವಿವಾಹಗಳಲ್ಲಿ ಬರೀ ಬಾಯಿಮಾತಿನ ಹೇಳಿಕೆಯಾಗಿ ದೆಯೇ ಹೊರತು ಕಾರ್ಯರೂಪದಲ್ಲಿಲ್ಲ! ಈಗ ಶ್ರೀ ಶೃಂಗೇರಿ ಜಗದ್ಗುರುಗಳ ಮಾರ್ಗದರ್ಶನ ಇಲ್ಲದಾಗಿದೆ. ಪಾಶ್ಚಾತ್ಯ ನಾಗರೀಕತೆ ಸೋಂಕಿನಿಂದಾಗಿ ಈ ಉದಾತ್ತ ಭಾವನೆಗಳು ಹೋಗಿ ವೈಯಕ್ತಿಕ ಭಾವನೆಗಳಿಗೆ ಎಡೆಕೊಟ್ಟಿದೆ ಹರ್ಬರ್ಟ್ ಸ್ಪೆನ್ಸರ್‌ರಂತವರ ವ್ಯಕ್ತಿಗತ ಸ್ವಾತಂತ್ರ್ಯ ತತ್ವ (Individualistic Theary)ವನ್ನು ಭಾರತೀಯರಲ್ಲೂ ಬೆಳೆಸಿ ಸಾವಿರಾರು ವರ್ಷಗಳಿಂದ ರೂಢಿಯಲ್ಲಿದ್ದ ಹಿಂದು ಅವಿಭಕ್ತ ಕುಟುಂಬಗಳು ಬ್ರಿಟಿಷರು ಭಾರತಕ್ಕೆ ಕಾಲಿಟ್ಟೊಡನೆ ಮಾಯ ವಾಗುವುದಕ್ಕೆ ಪ್ರಾರಂಭವಾಗಿ ಈಗ ಅವಿಭಕ್ತ ಹಿಂದು ಕುಟುಂಬ ಗಳು ಛಿದ್ರ-ಛಿದ್ರವಾಗಿದೆ. ಇದು ಆರ್ಥಿಕ ದಾರಿಯಾದರೂ ಹಿಂದು ಸಮಾಜದ ನೆಲೆಗಟ್ಟೇ ಬುಡಮೇಲಾಗಿದೆ. ಒಂದು ಕುಟುಂಬವೆಂಬ ಭಾವನೆಯೇ ಹೊರಟು ಹೋಗಿ ಕುಟುಂಬದ ಸದಸ್ಯರನ್ನು ಹೊರಗಿನವರಂತೆ ಕಾಣುವ ಸ್ಥಿತಿ ಬಂದಿದೆ.

ಗೌಡರ ಈಗಿನ ವಿವಾಹ ಸಮಾರಂಭಗಳಲ್ಲಿ ಸೋಬಾನೆಗಳು ಬಹಳ ಅಪರೂಪವಾಗಿವೆ. ವಿವಾಹಗಳಲ್ಲಿ ಅರಸಿನ ಹಚ್ಚುವಾಗ, ವರನಿಗೆ ಮುಖ ಕ್ಷೌರ ಮಾಡುವಾಗ, ವಧುವನ್ನು ಶೃಂಗರಿಸು ವಾಗ, ಬಾಗಿಲು ತಡೆಯುವಾಗ, ವಧುವಿನ ತಲೆ ಬಾಚುವಾಗ, ವಧುವನ್ನು "ಮಹಾಲಕ್ಷ್ಮಿ" "ಬ್ರಹ್ಮನರಾಣಿ" "ಕ್ಷೀರವಾರಿ ಧಿಸುತೆ" "ಜಾನಕಿ" "ಪಾರ್ವತಿ" ಎಂಬುದಾಗಿ ಹೋಲಿಸಿ, ವರ ನನ್ನು 'ಲೋಕನಾಯಕ' 'ವೆಂಕಟೇಶ' ತುಳಸಿಯ ಮಧ್ಯದೊಳ ಗಿರುವ ಕೃಷ್ಣ' 'ರಾಮವಣ್ಣಯ್ಯ ರಾಮಚಂದ್ರ'ನಿಗೆ ಹೋಲಿಸಿ ಹಾಡಿ ಹರಸುವ ಬದಲು ಧ್ವನಿಮುದ್ರಣ ಮಾಡಿದ ಚಲನಚಿತ್ರ ಗೀತೆಗಳನ್ನು ಹಾಡಿಸಿ ಕುಣಿಯುತ್ತಿರುತ್ತಾರೆ. ಈ ರೀತಿ ಸೋಬಾನೆಗಳು ಜನಾಂಗದ ಒಂದು ಸಂಸ್ಕೃತಿಯ ಹೃದಯದಿಂದ ಮೂಡಿಬಂದ ಸಾರಸ್ವತ ಸಂಪತ್ತು. ಸೋಬಾನೆಗಳು ನಾಗರೀಕತೆ ಯಿಂದ ವಿರೂಪಗೊಳ್ಳದೆ ತನ್ನ ಸಹಜ ಸೊಬಗನ್ನು ಉಳಿಸಿ ಕೊಂಡು ಕಳಕಳಿಸುತ್ತಿರುವ ಕುಸುಮ ಸಂಚಯ. ಹೃದಯ ದಿಂದ ಮೂಡಿಬಂದು ನೇರ ಹೃದಯವನ್ನು ಪ್ರವೇಶಿಸುವ ಹೃದಯವನ್ನು ತನ್ನದಾಗಿಸುವ ಶಕ್ತಿ ಈ ಜಾನಪದ ಗೀತೆ ಯಲ್ಲಿರುವಂತೆ ಮತ್ತಾವ ಸಾಹಿತ್ಯ ಪ್ರಾಕಾರಕ್ಕೂ ಇಲ್ಲ. ಆದರೆ ನಾಗರೀಕತೆಯನ್ನು ಹೊಂದಿದ ಈಗಿನ ಪೀಳಿಗೆ ಈ ವಿಷಯದಲ್ಲಿ ಅಸಡ್ಡೆ ಮನೋಭಾವನನ್ನು ಹೊಂದಿದಂತೆ ಕಂಡುಬರುತ್ತದೆ. ನವ ನಾಗರೀಕತೆ ಮತ್ತು ಪಾಶ್ಚಾತ್ಯ ರೀತಿಯನ್ನು ಅನುಕರಿಸು ತ್ತಿರುವ ಈ ಪೀಳಿಗೆ ಭಾರತೀಯ ಸಂಸ್ಕೃತಿಯನ್ನು ಮರೆತಂತೆ ಕಾಣುತ್ತದೆ 6-7 ಸಾವಿರ ವರ್ಷಗಳಲ್ಲಿ ಹಲವಾರು ಋಷಿ ವರ್ಯರು ತಮ್ಮ ಜೀವನನನ್ನೇ ಮುಡುಪಾಗಿಟ್ಟು ವರ್ಷ ಗಟ್ಟಲೆ ತಪಸ್ಸನ್ನಾಚರಿಸಿ ವಿಶ್ವ ಪ್ರೇಮದ ಮೂಲದಿಂದ ಬಂದು ನಮ್ಮ ನರನಾಡಿಯಲ್ಲಿ ಸಂಚರಿಸುತ್ತಾ ಜೀವನವನ್ನು ಪ್ರಚೋ ದಿಸುತ್ತಿರುವ ಉಪದೇಶ ಪರಂಪರೆಗಳು ಅಸದೃಶ ಸಾಹಸ, ಅತಿ ಮಾನುಷ ಪ್ರತಿಭೆ, ದೇವತೆಗಳಿಗೂ ಅಸೂಯೆ ತರುವಂತಹ ಶ್ರೇಷ್ಠ ಆಧ್ಯಾತ್ಮಿಕ ಪರಂಪರೆಗಳಿಂದ ಕೂಡಿದ ಉಪದೇಶದ ಪರಂ ಪರೆಗಳು ಭರತಖಂಡದ ಭವಿಷ್ಯಭರವಸೆಗೆ ಉತ್ತೇಜಕವಾಗಿದ್ದವು. ಆದರೆ ಇಂದು ಈ ಧನ್ಯತೆಯು ದಾರಿಗೆ ಪಾಶ್ಚಾತ್ಯ ವಿದ್ಯಾಭ್ಯಾಸ ಮತ್ತು ಪಾಶ್ಚಾತ್ಯ ಅನುಕರಣೆ ಸ್ವರ್ಗೀಯ ಪಾನೀಯಗಳು, ಹೊಸ ಬಗೆಯ ವಾಹಕ ಯಂತ್ರಗಳು, ಬೆಲೆಬಾಳುವ ಅಣಿ ಮಾಡಿದ ಆಹಾರ, ಸುಂದರವಾದ ಉಡಿಗೆ-ತೊಡಿಗೆ, ಮಹಾ ವೈಭವದಿಂದ ಕೂಡಿದ ಅರಮನೆಗಳು, ಲಜ್ಜಾಹೀನ ಸ್ವೇಚ್ಛಾ ವಿಹಾರಿ ವಿಚಿತ್ರ ವಸನನಾರಿಯರ ನೂತನ ಭಾವ ನೂತನ ಭಂಗಿ ಇವುಗಳೆಲ್ಲ ಭರತಖಂಡದಲ್ಲಿ ಹಿಂದೆ ಎಂದೂ ಕಂಡರಿಯದ ಆಸೆ ಯನ್ನು ಪ್ರಚೋದಿಸುತ್ತಿವೆ.

[ಮುಂದುವರೆಯುವುದು]

# ಆರೋಗ್ಯ ಚಿಂತನ:

ಡಾ|| ಎನ್. ಎಸ್. ಪ್ರವೀಣ ಎಂ.ಡಿ. ಕೇರಳ

## ಗರ್ಭಪಾತ (Abortion)

ಗರ್ಭಧರಿಸಿದ ಐದು ತಿಂಗಳೊಳಗೆ ಪ್ರಸವವಾದರೆ ಅದಕ್ಕೆ ಗರ್ಭಪಾತ ಎನ್ನುತ್ತಾರೆ. ಈ ಅವಧಿಯಲ್ಲಿ ಮಗುವಿನ ದೇಹದೊಳಗಿನ ಅಂಗಾಂಗಗಳು ಪೂರ್ಣವಾಗಿ ಬೆಳೆದಿರುವುದಿಲ್ಲವಾದ್ದರಿಂದ ಮಗು ಬದುಕುವುದಿಲ್ಲ. ಗರ್ಭಪಾತ ಹೆಚ್ಚಿನ ಸಂದರ್ಭಗಳಲ್ಲಿ ಗರ್ಭಧರಿಸಿದ ಮೂರು ತಿಂಗಳೊಳಗೆ ಆಗುತ್ತದೆ.

ಗರ್ಭಪಾತದಲ್ಲಿ ಎರಡು ವಿರುದ್ಧ ಮುಖಗಳಿವೆ. ಒಂದು ಹೆಣ್ಣಿಗೆ ಮಗು ಪಡೆಯಲು ಬಹಳ ಆಸೆ. ಆದರೆ ಕೆಲವೊಂದು ಕಾರಣಗಳಿಂದಾಗಿ ಗರ್ಭಪಾತವಾಗಿ ವ್ಯಸನವನ್ನು ಅನುಭವಿಸುತ್ತಾಳೆ. ಇನ್ನೊಂದು ಅವಿವಾಹಿತ/ಅನೈತಿಕ ಸಂಪರ್ಕದಿಂದ ಅಥವಾ ಮಾನಭಂಗಕ್ಕೆ ಒಳಗಾಗಿ ಗರ್ಭಪಾತ ಮಾಡಿಸಿಕೊಳ್ಳುವುದರ ಮೂಲಕ ನೆಮ್ಮದಿ ಅನುಭವಿಸುತ್ತಾಳೆ! ಎಷ್ಟೊಂದು ವಿಚಿತ್ರವಲ್ಲವೆ ?

### ಗರ್ಭಪಾತಕ್ಕೆ ಕಾರಣಗಳು :

ತನ್ನಷ್ಟಕ್ಕೆ ಆಗುವಂತಹ ಗರ್ಭಪಾತಕ್ಕೆ ಹಲವು ಕಾರಣಗಳಿರಬಹುದು. ಬೆಳೆಯುತ್ತಿರುವ ಭ್ರೂಣ ದೋಷಯುಕ್ತವಾಗಿದ್ದಲ್ಲಿ ಭ್ರೂಣ ಪೂರ್ಣಾವಸ್ಥೆಗೆ ಬೆಳೆಯದೆ ಮೊದಲೇ ಗರ್ಭಕೋಶದಿಂದ ಹೊರಹಾಕಲ್ಪಡುತ್ತದೆ.

ಗರ್ಭಿಣಿ ಸ್ತ್ರೀಗೆ ತಗಲುವ ಕೆಲವು ತರದ ಸೋಂಕುಗಳು, ಅತಿಯಾದ ಜ್ವರ, ಸಿಫಿಲಿಸ್ ಕಾಯಿಲೆ, ಗರ್ಭಕೋಶದ ಗೆಡ್ಡೆ, ಅಥವಾ ಗರ್ಭಕೋಶದ ರಚನೆಗೆ ಸಂಬಂಧಿಸಿದ ನ್ಯೂನತೆಗಳು, ತಾಯಿ–ಮಗುವಿನ ರಕ್ತ ಹೊಂದದಿರುವಿಕೆ, ಕ್ರೋಮೋಸೋಂಗಳ ರಚನೆಗಳ ನ್ಯೂನತೆ [chromosomal], ಗರ್ಭಿಣಿಯ ಹೊಟ್ಟೆಗೆ ಏಟಾಗುವಿಕೆ, ಮೊದಲ ತಿಂಗಳಲ್ಲಿ ಅತಿಯಾದ ದೈಹಿಕ ಶ್ರಮ ಇತ್ಯಾದಿ ಗರ್ಭಪಾತಕ್ಕೆ ಕಾರಣವಾಗಬಹುದು. ಹೆಚ್ಚಿನ ಸಂದರ್ಭಗಳಲ್ಲಿ ಯಾವುದೇ ನಿರ್ಧಿಷ್ಟ ಕಾರಣ ನೀಡುವುದೇ ಕಷ್ಟ.

### ರೋಗ ಚಿಹ್ನೆಗಳು ಹಾಗೂ ಚಿಕಿತ್ಸೆ :

ಗರ್ಭಪಾತದ ಮೊದಲ ಸೂಚನೆಯೆಂದರೆ ಯೋನಿಯ ಮೂಲಕ ರಕ್ತಸ್ರಾವವಾಗುವುದು. ಗರ್ಭಧರಿಸಿದ ನಂತರ ಯಾವುದೇ ಸಂದರ್ಭದಲ್ಲೂ ರಕ್ತಸ್ರಾವವಾದಲ್ಲಿ [ರಕ್ತದ ಒಂದೆರಡು ಹನಿ ಕಾಣಿಸಿಕೊಂಡರೂ ಸಹ] ಕೂಡಲೇ ವೈದ್ಯರ ಸಲಹೆ ಪಡೆಯಬೇಕಾದುದು ಅತ್ಯಗತ್ಯ. ನಂತರ ಹೊಟ್ಟೆನೋವು ಕಾಣಿಸಿಕೊಳ್ಳುತ್ತದೆ. ನಂತರ ಅತಿಯಾದ ರಕ್ತ ಹೋಗಬಹುದು. ಹೆಪ್ಪುಗಟ್ಟಿದ ರಕ್ತ ಹೋಗಿ ಕೆಲವೊಮ್ಮೆ ಭ್ರೂಣದ ದೇಹದ ಭಾಗಗಳೂ ಕಾಣಿಸಿಕೊಳ್ಳಬಹುದು. ಈ ಹಂತದಲ್ಲಿ ಗರ್ಭಪಾತ ತಡೆಯಲು ಸಾಧ್ಯವಿಲ್ಲ.

ಈ ಹಂತದಲ್ಲಿ ಕೂಡಲೇ ವೈದ್ಯರ ಬಳಿ ಹೋಗಬೇಕು. ಏಕೆಂದರೆ ಅತಿಯಾದ ರಕ್ತಸ್ರಾವವಾಗಿ ಪ್ರಾಣಾಪಾಯವಾಗಬಹುದು. ಈ ಸಂದರ್ಭದಲ್ಲಿ ಆಸ್ಪತ್ರೆಯಲ್ಲಿ 'ಡಿ ಅಂಡ್ ಸಿ.' (D & C = Deletation and Curettage) ಎಂಬ ಸರಳ ಶಸ್ತ್ರಚಿಕಿತ್ಸೆಯಿಂದ ಗರ್ಭಕೋಶದೊಳಗಿನ ಭ್ರೂಣ, ಮಾಸ, ಕೆರೆದು ತೆಗೆದು ಸ್ವಚ್ಛಗೊಳಿಸುತ್ತಾರೆ. ಇದರಿಂದಾಗಿ ಸ್ತ್ರೀ ಪೂರ್ಣವಾಗಿ ರೋಗಲಕ್ಷಣಗಳಿಂದ ಬಿಡುಗಡೆ ಹೊಂದುತ್ತಾಳೆ.

ಅತ್ಯಂತ ಮೊದಲ ಹಂತದಲ್ಲಿ, ಅಂದರೆ ಸ್ವಲ್ಪ ರಕ್ತಸ್ರಾವವಾಗುತ್ತಿರುವ ಸಂದರ್ಭದಲ್ಲಿ ಗರ್ಭಪಾತವನ್ನು ತಡೆಯಲು ಸಾಧ್ಯವಿದೆ. ಈ ಸಂದರ್ಭದಲ್ಲಿ ಸಂಪೂರ್ಣ ವಿಶ್ರಾಂತಿ ಬಹಳ ಪ್ರಾಮುಖ್ಯವಾದದ್ದು. ವೈದ್ಯರನ್ನು ಕಂಡು ಅವರ ಸಲಹೆಯಂತೆ ನಡೆದುಕೊಳ್ಳಬೇಕು. ಕೆಲವೊಂದು ಸಂದರ್ಭಗಳಲ್ಲಿ ಪ್ರೊಜೆಸ್ಟಿರಾನ್ ಹಾರ್ಮೋನ್ ಇಂಜೆಕ್ಷನ್ನು ತೆಗೆದುಕೊಳ್ಳಬೇಕಾಗಬಹುದು. ಗರ್ಭಪಾತ ನಿಂತಲ್ಲಿ ನಂತರ ಮಗುವಿನ ಬೆಳವಣಿಗೆ ಸಹಜವಾಗಿಯೇ ನಡೆದು ಆರೋಗ್ಯವಂತ ಮಕ್ಕಳೇ ಜನಿಸುತ್ತಾರೆ.

ಒಮ್ಮೆ ಗರ್ಭಪಾತವಾದಲ್ಲಿ ಪದೇ ಪದೇ ಗರ್ಭಪಾತ ಆಗಬೇಕೆಂದಿಲ್ಲ. ಮುಂದಿನ ಗರ್ಭಿಣಾವಸ್ಥೆಯಲ್ಲಿ ವೈದ್ಯರ ಸಲಹೆ ಪಡೆದು ಮುಂಜಾಗ್ರತೆ ಕ್ರಮಗಳನ್ನು ಪಾಲಿಸಿದರೆ ಗರ್ಭಪಾತವನ್ನು ತಪ್ಪಿಸಬಹದು ಎಂಬುದನ್ನು ಎಲ್ಲರೂ ಅರಿಯಬೇಕು.

### ಗರ್ಭಪಾತಕ್ಕೆ ಸಂಬಂಧಿಸಿದಂತೆ ಕೆಳಗಿನ ಅಂಶಗಳನ್ನು ನೆನಪಿನಲ್ಲಿಡಿ :

1. ಗರ್ಭ ಧರಿಸಿದ ನಂತರ ಯೋನಿಯಿಂದ ರಕ್ತಸ್ರಾವವಾದಲ್ಲಿ, ಅದು ಗರ್ಭಪಾತದ ಚಿಹ್ನೆಯಾಗಿರಬಹುದು. ಕೂಡಲೇ ವೈದ್ಯರ ಬಳಿ ಧಾವಿಸಿ.

2. ಗರ್ಭ ಧರಿಸಿದ ಕೂಡಲೇ ವೈದ್ಯರಿಂದ ಗರ್ಭಿಣಿ

ಯಾಗಿರುವುದನ್ನು ಖಾತರಿಪಡಿಸಿಕೊಂಡು, ರಕ್ತಪರೀಕ್ಷೆ, ರಕ್ತದ ಗುಂಪು, ಮೂತ್ರ ಪರೀಕ್ಷೆ ಇತ್ಯಾದಿ ಸರಳ ಪರೀಕ್ಷೆ ಮಾಡಿಸಿಕೊಳ್ಳಿ. ಹಾಗೂ ನಿಯಮಿತವಾಗಿ ಪರೀಕ್ಷೆ ಮಾಡಿಸಿಕೊಳ್ಳಿ. ಅವಶ್ಯವಿದ್ದಲ್ಲಿ ಸ್ಕ್ಯಾನಿಂಗ್ ಮಾಡಿಸಿಕೊಳ್ಳಬೇಕಾಗಬಹುದು.

3. ಗರ್ಭ ಧರಿಸಿದ ನಂತರ ಅತಿಯಾದ ದೈಹಿಕ ಶ್ರಮ, ಕಠಿಣ ಕೆಲಸ ಬೇಡ.

4. ಗರ್ಭಪಾತ ಮಾಡಿಸಿಕೊಳ್ಳಬೇಕೆಂದು ನಿಶ್ಚಯಿಸಿರುವ ಯಾವುದೇ ಹೆಣ್ಣು ಗುಟ್ಟಾಗಿಡಲು ಹೋಗಿ, ಅಶಿಕ್ಷಿತ, ನಾಟಿ ಔಷಧ ಮಾಡುವವರ ಬಳಿ ಹೋಗಿ ಅವರು ಉಪಯೋಗಿಸುವ ಕಡ್ಡಿ, ಗಿಡಮೂಲಿಕೆಗಳಿಂದಾಗಿ ಒಂದು ಕಡೆ ಗರ್ಭಪಾತವೂ ಆಗದೆ, ಮತ್ತೊಂದು ಕಡೆ ತನ್ನ ಪ್ರಾಣಕ್ಕೇ ಅಪಾಯ ತಂದುಕೊಳ್ಳಬೇಕಾಗಬಹುದು. ಈ ರೀತಿ ಗುಪ್ತವಾಗಿ ಗರ್ಭಪಾತ ಮಾಡಿಸಿಕೊಳ್ಳುವುದು ಕಾನೂನು ಬಾಹಿರ. ಈ ರೀತಿ ಮಾಡಿಸಿಕೊಳ್ಳುವವರು ಹಾಗೂ ಮಾಡುವವರು ಶಿಕ್ಷಾರ್ಹರಾಗುತ್ತಾರೆ. [Criminal Abortion] ಆದ್ದರಿಂದ ಗರ್ಭಪಾತ ಮಾಡಿಸಿಕೊಳ್ಳುವುದು ಅನಿವಾರ್ಯವೆಂದೇ ಆದಲ್ಲಿ ವೈದ್ಯರ ಬಳಿ ನೇರ ಹೋಗಿ ಸಲಹೆ ಪಡೆಯಿರಿ. ಯಾವುದೇ ಕಾರಣಕ್ಕೂ ಹಳ್ಳಿ, ನಾಟಿ ಔಷಧ ಮಾಡುವವರ ಬಳಿ ಗರ್ಭಪಾತ ಮಾಡಿಸಿಕೊಳ್ಳಬೇಡಿ.

5. ಪದೇ ಪದೇ ಗರ್ಭಪಾತ ಮಾಡಿಸಿಕೊಳ್ಳುವುದರಿಂದ ದೈಹಿಕ ಹಾಗೂ ಮಾನಸಿಕ ಆರೋಗ್ಯಕ್ಕೆ ಹಾನಿ ಇದೆ. ಇದರಿಂದ ಗರ್ಭಕೋಶದ ಸೋಂಕು, ಬಂಜೆತನ, ಅನಿಮಿಯಾ ಇತ್ಯಾದಿ ದೈಹಿಕ ತೊಂದರೆಗಳಲ್ಲದೆ ಮಾನಸಿಕ ತೊಂದರೆಗಳೂ ಉದ್ಭವಿಸಬಹುದು. ಆದ್ದರಿಂದ ಪದೇ ಪದೇ [ಒಂದು ಸಲಕ್ಕಿಂತ ಜಾಸ್ತಿ] ಗರ್ಭಪಾತ ಮಾಡಿ ಅಂತ ವೈದ್ಯರನ್ನು ಪೀಡಿಸಬೇಡಿ.

6. ಕುಟುಂಬ ಯೋಜನೆ ಕ್ರಮಗಳ ಬಗ್ಗೆ ಸರಿಯಾದ ಮಾಹಿತಿಯನ್ನು ನಿಮ್ಮ ವೈದ್ಯರಿಂದ ಪಡೆದು ಅವನ್ನು ಸಮರ್ಪಕವಾಗಿ ಬಳಸಿ ಅನಗತ್ಯವಾಗಿ ಪದೇ ಪದೇ ಗರ್ಭ ಧರಿಸುವುದನ್ನು ತಡೆಯಿರಿ. ಕುಟುಂಬ ಯೋಜನಾ ಕ್ರಮಕ್ಕಾಗಿ ಗರ್ಭಪಾತ ಮಾಡಿಸಿಕೊಳ್ಳುವ ಹಾದಿಯನ್ನು ಬಳಸುವುದು ಸರಿಯಲ್ಲ.

7. ನಿಮಗೆ ಮಕ್ಕಳು ಸಾಕೆಂದಾದಲ್ಲಿ ಶಾಶ್ವತ ಸಂತಾನ ನಿಯಂತ್ರಣ ಶಸ್ತ್ರಚಿಕಿತ್ಸೆಗೆ ಒಳಪಟ್ಟು, ಮತ್ತೆ ಗರ್ಭಧರಿಸುವ ಭಯ ಇಲ್ಲದೆ ನೆಮ್ಮದಿಯಾಗಿರಿ.

8. ಕೆಲವೊಮ್ಮೆ ವೈದ್ಯರೇ ನಿಮಗೆ ಗರ್ಭಪಾತ ಮಾಡಿಸಿಕೊಳ್ಳಲು ಸಲಹೆ ಕೊಡಬಹುದು ! ಉದಾ : ಗರ್ಭದಲ್ಲಿ ಬೆಳೆಯುತ್ತಿರುವ ಮಗು ಅಂಗದೋಷ, ನ್ಯೂನತೆಯಿಂದ ಕೂಡಿದೆ ಎಂಬುದಾಗಿ ವೈದ್ಯರಿಗೆ ಮೊದಲೇ ತಿಳಿದು ಬಂದಲ್ಲಿ [ಸ್ಕ್ಯಾನಿಂಗ್ ಮೂಲಕ] ಹಾಗೆಯೇ ತಾಯಿ ಹೃದಯ, ಮೂತ್ರಜನಕಾಂಗ ಇತ್ಯಾದಿ ತೀವ್ರತರದ ಕಾಯಿಲೆಯಿಂದ ಬಳಲುತ್ತಿದ್ದಲ್ಲಿ ತಾಯಿಯ ಆರೋಗ್ಯ ದೃಷ್ಟಿಯಿಂದ ಗರ್ಭಪಾತ ಮಾಡಿಸಿಕೊಳ್ಳಲು ವೈದ್ಯರು ಹೇಳಬಹುದು. ಇಂತಹ ಸಂದರ್ಭದಲ್ಲಿ ಅವರ ಸಲಹೆಯಂತೆ ನಡೆಯಿರಿ.

9. ಭಾರತದಲ್ಲಿ ಹೆಣ್ಣಿಗೆ ಗರ್ಭಧರಿಸಿದ 5 [ಐದು] ತಿಂಗಳೊಳಗೆ ಭ್ರೂಣ ಮುಂದೆ ಬೆಳೆಯುವುದು ಬೇಡವೆನಿಸಿದಲ್ಲಿ, ಕೆಲವೊಂದು ಕಾರಣಗಳ ಚೌಕಟ್ಟಿನೊಳಗೆ ಗರ್ಭಪಾತ ಮಾಡಿಸಿಕೊಳ್ಳಲು ಕಾನೂನಿನ ಪ್ರಕಾರ ಅನುಮತಿ ಇದೆ. ಆದರೆ ಇದು ತಜ್ಞವೈದ್ಯರ ಮೂಲಕವೇ ನಡೆಯಬೇಕು. ಮೂರು ತಿಂಗಳ ನಂತರ ಗರ್ಭಪಾತ ಮಾಡಿಸಿಕೊಳ್ಳುವುದರಿಂದ ಅಪಾಯ ಜಾಸ್ತಿ ಎಂಬುದನ್ನರಿಯಿರಿ. ●

## -o- ನಗೆ ಹನಿಗಳು -o-

ಅಳುತ್ತಿದ್ದ ಪುಟ್ಟ ಹುಡುಗನನ್ನು ಕಂಡು ಅಯ್ಯೋ ಎನಿಸಿ ರಾಜು 'ಯಾಕೆ ಮಗು ಅಳ್ತಾ ಇದೀಯ ?'

'ನನ್ನ ಅಣ್ಣನಿಗೆ ಶಾಲೆಗೆ ರಜ ಇದೆ. ನನಗೆ ಮಾತ್ರ ಇಲ್ಲ ಅಳುತ್ತಲೇ ಹೇಳಿದ.

'ನಿನಗಿಲ್ಲವಾ, ನಿನಗೆ ಮಾತ್ರ ಯಾಕೆ ರಜ ಇಲ್ಲ ?' ಅರ್ಥವಾಗದೆ ಕೇಳಿದ ರಾಜು

'ಯಾಕೆಂದರೆ ನಮ್ಮಮ್ಮ ನನ್ನ ಶಾಲೆಗೆ ಕಳಿಸ್ತ ಇಲ್ಲ'

O O O

ಬೆಳಗ್ಗೆಯೇ ಡಾಕ್ಟರಿಗೆ ಫೋನ್ ಬಂದಿತು.

'ಡಾಕ್ಟರೇ ನಾನು ಶಂಕರೇಗೌಡ ಮಾತಾಡ್ತ ಇರೋದು, ನಿನ್ನೆ ರಾತ್ರಿ ನನ್ನ ಅಳಿಯನ ಕಾಲಿಗೆ ಗುಂಡು ಹೊಡೆದು ಬಿಟ್ಟೆ. ನೋವು ತುಂಬ ಇದೆ. ನರಳುತ್ತಿದ್ದಾನೆ ಸ್ವಲ್ಪ ಬರ್ತಿರ ?

'ಏನು ಗೌಡ್ರೆ ? ಸ್ವಂತ ನಿಮ್ಮ ಅಳಿಯನಿಗೆ ಗುಂಡೇಟು ಹೊಡೆಯೋದಾ ? ನಿಮಗೆ ಮನಸ್ಸಾದರೂ ಹೇಗೆ ಬಂತು? ಕೇಳಿದರು ಡಾಕ್ಟರು.

'ನಾನು ಹೊಡೆದಾಗ ಅವನಿನ್ನು ಒಪ್ಪಿರಲಿಲ್ಲ ನನ್ನ ಅಳಿಯ ಆಗಕ್ಕೆ'.

# ವರದಕ್ಷಿಣೆಗೆ ಏಯ್ಡ್ಸ್ [AIDS] ಅಂಟಿಕೊಂಡಿದೆಯೇ ?

ವರದಕ್ಷಿಣೆ ಸಿಗದೆ ಮದುವೆಯಾಗುವುದಿಲ್ಲ ಎಂದು ಪಟ್ಟು ಹಿಡಿದು ಕುಳಿತಿದ್ದ ಮಧುಗೆ ಈಗ ಅದೃಷ್ಟ ಫಲಿಸಿತು ಎಂದರೆ ತಪ್ಪಾಗಲಾರದು. ಮಧು ಬೆಂಗಳೂರಿನ ಖಾಸಗಿ ಕಾರ್ಖಾನೆಯಲ್ಲಿ ಉದ್ಯೋಗ ಮಾಡುತ್ತಿದ್ದನು. ಸುಮಾರು 27 ವರ್ಷದ ವಯಸ್ಸಿನ ಮಧುವನ್ನು ತಂದೆ–ತಾಯಿ ಗೆಳೆಯರು ಇವನ ಮದುವೆಯ ಬಗ್ಗೆ ಒತ್ತಾಯಿಸುತ್ತಿದ್ದರು. ತಾಯಿಯಂತು ತನ್ನ ಕಷ್ಟಗಳನ್ನು ಹೇಳಿಕೊಂಡು ಆಗಾಗ್ಗೆ ಮಗನನ್ನು ಮದುವೆಗಾಗಿ ಒತ್ತಾಯಿಸುತ್ತಿದ್ದಳು. ಎಲ್ಲಕ್ಕೂ ಮಧುವಿನ ಉತ್ತರ ನನಗೆ ವರದಕ್ಷಿಣೆ ಕೊಡುವ ಕಡೆಯಿಂದ ಮದುವೆಯಾಗುತ್ತೇನೆ. ಇಲ್ಲವಾದರೆ ನನ್ನ ಜೀವನದಲ್ಲಿ ಮದುವೆ ಇಲ್ಲವೆಂದು ತಿಳಿಯಿರಿ ಅನ್ನುತ್ತಿದ್ದ.

ಅಂದು ಕಾರ್ಖಾನೆಗೆ ರಜೆ ಹಾಕಿದ್ದ ಮಧು ಪೇಟೆ ಕಡೆಗೆ ಸುತ್ತಾಡಿಕೊಂಡು ಬರಲು ತೆರಳಿದ್ದ. ಹಾಗೆಯೇ ಪಾರ್ಕ್‌ನಲ್ಲಿ

ಚೆಟ್ಟಿನೆರವನ ಪೊನ್ನಪ್ಪ ಆಶಾ, ವಿರಾಜಪೇಟೆ

ಒಂಟಿಯಾಗಿ ಕುಳಿತಿದ್ದ ಮಧು ತನ್ನ ಕೈಲಿದ್ದ ಪತ್ರಿಕೆಯ ಪುಟ ತಿರುವುತ್ತಿದ್ದ. ಅದರಲ್ಲಿ ಒಂದು ಜಾಹೀರಾತು ಪ್ರಕಟಣೆಯಾಗಿತ್ತು. ವರ ಬೇಕಾಗಿದ್ದಾನೆ ಎಂದು ಇತ್ತು. ಅದರಲ್ಲಿ 5 ಲಕ್ಷ ರೂಪಾಯಿಗಳ ನಗದು ಹಾಗೂ ಒಡವೆ, ವಸ್ತ್ರ ಮನೆಗೆ ಬೇಕಾದ ಸೌಲಭ್ಯಗಳನ್ನು ಕೊಡುವುದಾಗಿಯೂ, ಹುಡುಗನ ವಯಸ್ಸು, ಜಾತಿ, ಕೆಲಸದಲ್ಲಿ ಯಾವುದೇ ಅಡೆತಡೆಗಳಿಲ್ಲ. ದೃಢಕಾಯ ಗಂಡಸು ಬೇಕಾಗಿದ್ದಾನೆ. ಇಚ್ಛಿಸುವ ವ್ಯಕ್ತಿ ಈ ವಿಳಾಸಕ್ಕೆ ಸ್ವತಃ ಆಗಮಿಸುವುದಾಗಿ ಬರೆದಿತ್ತು.

ತಕ್ಷಣ ಮಧು ಆ ವಿಳಾಸವನ್ನು ಪತ್ತೆ ಹಚ್ಚಿ ಹುಡುಗಿಯನ್ನು ನೋಡುವ ಕಾತರಕ್ಕಿಂತ ಹಣದ ಲಾಲಸೆಯನ್ನು ಹೆಚ್ಚಿಸಿಕೊಂಡು ಆ ಸ್ಥಳಕ್ಕೆ ತೆರಳಿದ. ಅದು ಹುಡುಗಿಯ ತಂದೆ ತಾಯಿಯ ವಾಸವಾಗಿದ್ದ ಸಾಮಾನ್ಯ ಒಂದು ಮನೆಯಾಗಿತ್ತು. ವಧು ಪರೀಕ್ಷೆ ನಡೆಯಿತು. ಮದುವೆ ಬೇಗನೆ ಅದ್ದೂರಿಯಿಂದ ನಡೆಯಬೇಕೆಂದು ತಿಳಿಸಿದನು. ಹುಡುಗಿಯು ತನ್ನ ಉದ್ಯೋಗವನ್ನು ತಿಳಿಸಿದಳು. ತಾನು ಸೌದಿ ಅರೇಬಿಯಾದಲ್ಲಿ ನರ್ಸ್ ಆಗಿರುವುದಾಗಿಯು, ಮದುವೆಯ ನಂತರ ಭಾರತದಲ್ಲೇ ನರ್ಸಿಂಗ್ ಹೋಂ ತೆರೆಯುವುದಾಗಿಯು ತಿಳಿಸಿದಳು. ಅಂತೆಯೇ ಮಧು ತನಗೀಗ ಮದುವೆ ಯೋಗ ಕೂಡಿಬಂತೆಂದು ಸಂತೋಷದಿಂದ ತನ್ನ ಮನೆಗೆ ತೆರಳಿದನು. ಮನೆಯವರೊಂದಿಗೆ ಗೆಳೆಯರೊಂದಿಗೆ ವಿಷಯವನ್ನು ಹಂಚಿಕೊಂಡನು. ಎಲ್ಲರೂ ಅಬ್ಬಾ...ಈಗಲಾದರೂ ಮದುವೆಗೆ ಒಪ್ಪಿದನಲ್ಲ ಎಂದು ಸಂತೋಷಪಟ್ಟರು.

ಅಂತೂ ಅದ್ದೂರಿಯಿಂದ ಸಕಲ ಖರ್ಚು ಸಮೇತವಾಗಿ ಹುಡುಗಿಯ ಕಡೆಯಿಂದ ಮದುವೆ ನಡೆಯಿತು. ಮದುವೆ ದಿಬ್ಬಣವು ಮಧುವಿನ ಮನೆ ಸೇರಿತು. ಮಧುವಿನ ತಂದೆ ತಾಯಿ ಬಂಧು–ಬಳಗ ಹುಡುಗಿ ರೀಟಾಳನ್ನು ಮನೆ ತುಂಬಿಸಿಕೊಂಡರು. ರೀಟಾ ಮಧುವಿನ ಕೋಣೆಗೆ ಆಗಮಿಸಿ ಸುಮ್ಮನೆ ಕುಳಿತಿದ್ದಳು. ಮಧು ಅವಳ ಮುಖ ನೋಡಿ ಮೆಲ್ಲನೆ ಅವಳ ಪಕ್ಕಕ್ಕೆ ಸರಿದನು. ಆದರೆ ರೀಟಾ ತಿರಸ್ಕಾರದ ಮನೋಭಾವದಿಂದ ಅವನನ್ನು ನೋಡದೆ ಹಿಂದಕ್ಕೆ ಸರಿದಳು. ಇವಳ ಈ ಇಳಿಮನಸ್ಸಿನ ಶೋಭೆ ಮಧುವನ್ನು ಪೇಚಾಟಕ್ಕೀಡು ಮಾಡಿತು.

ರೀಟಾ ಮಧುವನ್ನು ಕುರಿತು ಹೀಗೆಂದಳು. ತನ್ನನ್ನು ಮದುವೆ ಮಾಡಿಕೊಂಡಿರಿ. ಈ ಎಲ್ಲಾ ಒಡವೆ ವಸ್ತ್ರ, ಸಾಮಾನುಗಳು ಹಾಗೂ ಈ 5 ಲಕ್ಷ ರೂಪಾಯಿಗಳನ್ನು ವರದಕ್ಷಿಣೆಯಾಗಿ ನಿಮಗೆ ಕೊಡುತ್ತೇನೆ. ಆದರೆ ದೇಹವೊಂದನ್ನು ಬಿಟ್ಟು ಉಳಿದೆಲ್ಲವನ್ನು ನಿಮ್ಮ ಸ್ವಾಧೀನದಲ್ಲಿಟ್ಟುಕೊಳ್ಳಿ. ದಯವಿಟ್ಟು ಕ್ಷಮಿಸಿ. ನನ್ನನ್ನು ಮುಟ್ಟಬೇಡಿ ಎಂದಳು. ದಿಕ್ಕು ತೋಚದಾದ ಮಧು ಅವಳನ್ನು ಬಗೆ ಬಗೆಯಾಗಿ ಪ್ರಶ್ನಿಸತೊಡಗಿದ. ಅದಕ್ಕೆ ಅವಳ ಉತ್ತರ, ನಾನು ವಿದೇಶದಲ್ಲಿರಲಿಲ್ಲ ನಾನು ಬೊಂಬಾಯಿಯಲ್ಲಿ ಬಾಡಿಗೆ ಮನೆಯಲ್ಲಿದ್ದು ವೇಶ್ಯಾವಾಟಿಕೆ ಮಾಡುತ್ತಿದ್ದೆ. ನನ್ನ ಮನೆಯವರಿಗೆ ನಾನು ಮದುವೆಯಾಗಬೇಕೆಂಬ ಆಸೆ ಇತ್ತು. ಅದಕ್ಕಾಗಿ 10 ಜನಕ್ಕೆ ಕಾಣುವ ಹಾಗೆ ನಿಮ್ಮಿಂದ ಮಾಂಗಲ್ಯ ಕಟ್ಟಿಸಿಕೊಂಡೆ. ಮದುವೆಯ ನಂತರದ ಸುಖವನ್ನು ನಾನು ಈ ಹಿಂದೆ ಅದೆಷ್ಟೋ ಜನರೊಂದಿಗೆ ಅನುಭವಿಸಿರುವೆ. ಈಗ ನಾನು ಆಸ್ಪತ್ರೆಯಲ್ಲಿ ಚಿಕಿತ್ಸೆ ಪಡೆಯುತ್ತಿದ್ದೇನೆ. ವೈದ್ಯಕೀಯ ತಪಾಸಣೆಯ ನಂತರ ನನ್ನ ದೇಹದಲ್ಲಿ ಸುಡುತ್ತಿರುವ ಖಾಯಿಲೆಯ ನಿಜಾಂಶ ತಿಳಿಯಿತು. ಹೆಚ್ಚು ಕಾಲ ಬದುಕಲು ಸಾಧ್ಯವಾಗದ ಈ ಖಾಯಿಲೆಯಿಂದ ನನ್ನ ತಂದೆ–ತಾಯಿಯ ಆಸೆಯನ್ನು ಪೂರೈಸಲು ಸಾಧ್ಯವಿಲ್ಲವೆಂದು ಈ ನಿರ್ಧಾರಕ್ಕೆ ಬಂದೆ. ನನಗೀಗ ಏಯ್ಡ್ಸ್

[10 ಪುಟ ನೋಡಿ]

# ಗುರು - ಶಿಷ್ಯ [ಹಾಸ್ಯ ಲೇಖನ]

ಗುರು : ಎಲ್ಲಿ ನನ್ನ ಶಿಷ್ಯ ಇಷ್ಟೊತ್ತಾದರೂ ಬರಲಿಲ್ಲ ವಲ್ಲಾ [ಎಂದು ಮನಸ್ಸಿನಲ್ಲಿ ಅಂದುಕೊಳ್ಳುತ್ತಾನೆ].

ಶಿಷ್ಯ : ಓ...ಹೋ...ಹೋ...ನಮಸ್ಕಾರ ಗುರುಗಳಿಗೆ.

ಗು : ನಮಸ್ಕಾರ ಕಣಯ್ಯ.

ಶಿ : ಏನು ಗುರುಗಳೇ ಸಮಾಚಾರ. ಇವತ್ತು ಇಷ್ಟು ಬೇಗ್ನೆ ಈ ಸೋಮಾರಿ ಕಟ್ಟೆಗೆ ಬಂದುಬಿಟ್ಟಿದ್ದೀರಲ್ಲಾ ?

ಗು : ಏ...ಸುಮ್ನೆ ಮನೆಯಲ್ಲಿ ಬೇಜಾರಾಯ್ತು ಕಣೊ. ಅದ್ಕೆ ಬೇಗ ಬಂದೆ.

ಶಿ : ಅದ್ಯಾಕೆ ಗುರುಗಳೇ ಬೇಜಾರು ? ಮನೇಲಿ ಅಮ್ಮಾವ್ರು ಏನಾದ್ರೂ ಅಂದ್ರ ಗುರುಗಳೆ.

ಗು : ಏನಿಲ್ಲ ಕಣೊ.

ಶಿ : ಮತ್ಯಾಕೆ ಗುರುಗಳೆ. ನಾನು ನಿಮ್ಮ ಶಿಷ್ಯ ಅಂದ ಮ್ಯಾಲೆ ಯಾಕೆ ಗುರುಗಳೇ ನನ್ನತ್ರ ಹೇಳೋಕೆ ಸಂಕೋಚ. ಹೇಳಿ ಗುರುಗಳೆ. ಒಬ್ಬರ ಕಷ್ಟನ ಇನ್ನೊಬ್ಬರ ಹತ್ತಿರ ಹೇಳಿ ಕೊಂಡರೆ ಮನಸ್ಸು ಎಷ್ಟೋ ಸಮಾಧಾನ ಆಗುತ್ತದೆ ಗುರುಗಳೆ. ಹೇಳಿ ಗುರುಗಳೆ...

ಗು : ಅಂತದ್ದೇನಿಲ್ಲ ಕಣೊ.

ಶಿ : ಮತ್ತೆ...

ಗು : ಅದೇ...ನನ್ನ ಜನಾಂಗದವರದ್ದು ಒಂದು ಪತ್ರಿಕೆ ಇದೆಯಲ್ಲ "ಕೊಡಗು ಸಂಗಾತಿ" ಅಂತ. ಅವರಿಗೆ ಕೊಡೋದಕ್ಕೆ ನನ್ನ ಹೆಂಡ್ತಿ ಚಂದ ಹಣ 120ರೂ. ಕೊಟ್ಟಿದ್ಲು ಕಣೊ. ಅದ್ನ ನಾನು ಖರ್ಚು ಮಾಡ್ಕೊಂಡೆ. ಇವತ್ತು ಶನಿ ಶನಿಂತ ಕೊಡಗು ಸಂಗಾತಿಯವರು ನಾನಿಲ್ಲದಿದ್ದಾಗ ಮನೆಗೆ ಬಂದು ನಿಮ್ಮದು ಪತ್ರಿಕೆಯ ಚಂದ ಹಣ ಬಾಕಿ ಇದೆ ಕೊಡ್ತೀರಾ ಅಂದ್ರಂತೆ. ಅದ್ಕೆ ನನ್ನ ಹೆಂಡ್ತಿ ನನ್ನ ಜೊತೆ ಸಿಕ್ಕಾಪಟ್ಟೆ ರೇಗಾಡಿದ್ಲು. ಹಂಗಾಗಿ ಬೇಜಾರಾಗಿ ಬೇಗ ಬಂದೆ ಕಣೋ.

ಶಿ : ಅಲ್ಲಾ ಗುರು ! ದುಡ್ಡು ಕೊಟ್ಟು ಓದುವವರು ಒನ್ನ್ ಟ್ವೆಂಟಿ [120], ಅಂದ್ಮೇಲೆ ದುಡ್ಡು ಕೊಡದೆ ಓದುವವರು ಏನು ಅಂತ ನಿಮ್ಗೆ ಗೊತ್ತಿಲ್ವ ?

ಗು : ಗೊತ್ತಿತ್ತು ಕಣೊ. ಅವತ್ತು ನನ್ನ ಇಬ್ರು ಫ್ರೆಂಡ್ಸ್ ಸಿಕ್ಕಿದ್ರು ಕಣೊ. ಅವರು ಸಿಕ್ಕಿದ್ದೆ ತುಂಬಾ ಅಪ ರೂಪ. ಹಂಗಾಗಿ ಸ್ವಲ್ಪ ಎಣ್ಣೆ ಹಾಕೋಣ ಅಂತ ಮೋಹಕ ಬಾರ್‌ಗೆ ಹೋದ್ವಿ. ಹಂಗಾಗಿ ಆ 120 ರೂ. ಖರ್ಚಾಯಿತು. ಇನ್ನು ಹೆಂಡ್ತಿಗೆ ಹೇಳಿದ್ರೆ ಬಯ್ಯುತ್ತಾಳೆ ಅಂತ ಹೇಳಿರಲಿಲ್ಲ.

ಶಿ : ಹೌದಾ ? ಹೋಗ್ಲಿ ಬಿಡು ಗುರು. ನಾನೀಗ 120 ರೂ. ಕೊಡ್ತೇನೆ. ಅದನ್ನು ತಗೊಂಡೋಗಿ ಕಟ್ಟಿಬಿಡು.

ಗು : ತುಂಬಾ ಥ್ಯಾಂಕ್ಸ್ ಕಣೊ.

ಶಿ : ಏ...ಇದೇನು ಮಹಾ ಬಿಡು ಗುರು. ಶಿಷ್ಯನಾಗಿ ಇಷ್ಟು ಸಹಾಯ ಮಾಡ್ಲಿಲ್ಲ ಅಂದ್ರೆ ಏನು ಗುರು.

ಗು : ಅದ್ರೂ ಗುರು ಆಗಿದ್ದು ಶಿಷ್ಯನ ಹತ್ತಿರ ಹಣ ತೆಗೆದುಕೊಳ್ಳುವುದಕ್ಕೆ ಸ್ವಲ್ಪ ಸಂಕೋಚ ಅಷ್ಟೆ.

ಶಿ : ಈ ಖುಷಿಯಲ್ಲಿ ನನಗೇನು ಕೊಡ್ತೀಲ್ವ ಗುರು.

ಗು : ಏನು ಬೇಕೋ ನಿನಗೆ ?

ಶಿ : ಏನಿಲ್ಲ ಗುರು. ಒಂದು ಮೋರಿ ಸಿಗರೇಟು.

ಗು : ಥೂ...ಬಡ್ಡಿ ಮಗ್ನೆ. ಸಿಗರೇಟು ಹೆಸ್ರು ಹೇಳೊ ದಕ್ಕೆ ಬಾರದಿದ್ರು ಸಿಗರೇಟು ಸೇದ್ತಿಯಲ್ಲೊ. ಅದು ಮೋರಿ ಅಲ್ಲ ಕಣೋ. ಅದು ಮೋರ್ ಅಂತ.

ಶಿ : ಓ...ಹಂಗಾ ಗುರು. ಊಟದ ಹೊತ್ತಾಯ್ತು. ಮನೆಗೆ ಹೋಗೋಣ್ವಾ ಗುರು. ನಾಳೆ ಸಿಕ್ತೇನಿ ಬಾಯ್.

● ಸುಶೀಲಾ ರಮೇಶ್, ಮೈಸೂರು.

---

[9ನೇ ಪುಟದಿಂದ]

ವರದಕ್ಷಿಣೆಗೆ ಏಯ್ಡ್ಸ್ ಅಂಟಿಕೊಂಡಿದೆಯೋ ?

[A I D S]. ನನ್ನ ಕಾಯಿಲೆಯನ್ನು ಹಂಚಿಕೊಳ್ಳುವ ಆಸೆ ಇದ್ದರೆ ನನ್ನನ್ನು ಅನುಭವಿಸು ಎಂದಳು. ಇದನ್ನು ಕೇಳಿದ ಮಧು ಹುಚ್ಚನಾದ. ವಿಚಿತ್ರವಾಗಿ ಆಡತೊಡಗಿದ. ತನ್ನ ಆಸೆ ಆಕಾಂಕ್ಷೆಗಳಿಗೆ ಮಣ್ಣು ಎರಚಿದ ರೀಟಾಳನ್ನು ಹೊರಗೆ ಹೋಗಲು ಆಜ್ಞಾಪಿಸಿದ. ಆದರೆ ರೀಟಾ ದಯವಿಟ್ಟು ಇದೊಂದು ದಿನ ನಿಮ್ಮ ಮನೆಯಲ್ಲಿರಲು ಅವಕಾಶ ಕೊಡಿ ಎಂದು ಪರಿಪರಿ ಯಾಗಿ ಬೇಡಿಕೊಂಡಳು. ಆದರೆ ಮಧು ಅವಳ ಮೇಲೆ ದಯೆ ತೋರಲಿಲ್ಲ. ರೀಟಾಳನ್ನು ಹೊರಗೆ ಎಳೆದು ಹಾಕಿ ಅವಳ ಸಕಲ ವಸ್ತುಗಳನ್ನು ಅಂಗಳದಲ್ಲಿ ಚೆಲ್ಲಾಡಿದ. ಹಣದ ಕಟ್ಟನ್ನು ಎಸೆದನು. ಅಲ್ಲಿ ಸೇರಿದ ಜನರು ಸಮಾಧಾನಿಸಿದರು. ಕಾರಣ ವೇನೆಂದು ವಿಚಾರಿಸಿದರು. ವರದಕ್ಷಿಣೆಯು ಸಿಕ್ಕಿದ ಮೇಲೆ ಯಾಕೆ ಹೀಗಾಡುವೆ ಎಂದಾಗ, ಉದ್ರೇಕದಿಂದ ಮಧು ಗಟ್ಟಿ ಯಾಗಿ ಕಿರುಚಿದ. ಬೇಡಾ...ಆ ವರದಕ್ಷಿಣೆಯಲ್ಲಿ ಭೀಕರ ರೋಗದ ಏ...ಯ್ಡ್...ಸ್...ಅಂಟಿಕೊಂಡಿದೆ. ○

# ಗೌಡರ ವಿವಾಹ ಪದ್ಧತಿ : ತೆರೆ 6.25 ಪೈಸೆ

| | |
|---|---|
| 1. ಹುಡುಗಿಯು ಮುತ್ತೈದೆತನಕ್ಕೆ ಕಟ್ಟುವ ಹಣ | 4–50 |
| 2. ಎಲೆ ಅಡಿಕೆ ಖರ್ಚು | 0–50 |
| 3. ಸ್ಥಳ ಮರ್ಯಾದೆ | 0–50 |
| 4. ಗೌಡ ಆರತಿ | 0–25 |
| 5. ತಾಯಿ ಆರತಿ | 0–25 |
| 6. ಬೀಡು ಆರತಿ | 0–25 |
| ಒಟ್ಟು | 6–25 |

**ದಂಪತಿ ಮುಹೂರ್ತ :**

ಉಭಯ ಕಡೆಯವರು ಮೊದಲೇ ತೀರ್ಮಾನಿಸಿಕೊಂಡಂತೆ ಸಮಾಜದಲ್ಲಿ, ಕಲ್ಯಾಣ ಮಂಟಪದಲ್ಲಿ, ದೇವಸ್ಥಾನದ ಛತ್ರದಲ್ಲಿ ಇಲ್ಲವೇ ಕೆಲವೊಮ್ಮೆ ರಜಾದಿನಗಳಲ್ಲಿ ಶಾಲಾ ಕಟ್ಟಡದಲ್ಲಿ ಎರಡು ಕಡೆಯವರಿಗೂ ಅನುಕೂಲವಾಗುವ ಸ್ಥಳದಲ್ಲಿ ಮದುವೆ ಏರ್ಪಡಿಸುವರು. ಸಮಾಜದ ಕಟ್ಟಡಗಳಲ್ಲಿ ಎಲ್ಲಾ ಶಾಸ್ತ್ರಗಳನ್ನು ಮಾಡುವ ಏರ್ಪಾಡುಗಳೂ ಇರುವುದು. ಉಭಯ ಕಡೆಯವರು ಅಲ್ಲಿಯೇ ಶಾಸ್ತ್ರಗಳನ್ನು ಮಾಡುವರು. ಇಲ್ಲವೇ ಅವರ ಇಷ್ಟಾನುಸಾರ ಮನೆಯಿಂದಲೇ ಶಾಸ್ತ್ರಗಳನ್ನು ಮುಗಿಸಿ ಸಮಾಜದ ಕಟ್ಟಡದಲ್ಲಿ ಚಪ್ಪರ ಊಟದ ಏರ್ಪಾಡು ಮಾಡಿ, ಅಲ್ಲಿಗೆ ಬಂದು ಸೇರಿಕೊಳ್ಳುವರು. ಅಂತೆಯೇ ಮರುದಿನ ನಡೆಯುವ ಶೇಷೋಪಚಾರ [ಅಕ್ಕಿ ಮುಹೂರ್ತ]ಕ್ಕೆ ಮೊದಲು ಧಾರಾ ಕಾರ್ಯಕ್ರಮವನ್ನು ಮುಗಿಸಿ ನಿಗದಿತ ಸಮಯಕ್ಕೆ ಆರತಕ್ಷತೆಗೆ ಕೂರಿಸುವರು ಹಿಂದೆ ಹೇಳಿದಂತೆ ಸರದಿಯಂತೆ ಎಲ್ಲರೂ ಬಂದು ಮಧುಮಕ್ಕಳ ತಲೆಗೆ ಅಕ್ಕಿ ಹಾಕಿ ಆಶೀರ್ವದಿಸುವರು. "ಆಯುರಾರೋಗ್ಯ ಸುಖ ಸಂಪನ್ನರಾಗಿ ಪುತ್ರ ಕಳತ್ರ ವಂಶಾಭಿವೃದ್ಧಿಯಾಗಿ ಧೀರ್ಘಾಯುಷ್ಯರಾಗಿ ಬಾಳಿರಿ" ಎಂದು ಮನಸಾರೆ ಹರಸಿ ಅಕ್ಕಿ ಹಾಕುವರು. ಮದುವೆಯ ಕಾರ್ಯಕ್ರಮ ಎಲ್ಲವೂ ಮುಗಿದ ನಂತರ ಉಭಯ ಕಡೆಯವರು ಕಲ್ಯಾಣ ಮಂಟಪದ ಬಾಡಿಗೆಯಿಂದ ಹಿಡಿದು, ಮಡಿವಾಳ, ಓಲಗದವರ ಚಾರ್ಜು ಕೂಡಾ, ಊಟದ ಖರ್ಚು ವೆಚ್ಚಗಳನ್ನು ಹೆಣ್ಣು ಮತ್ತು ಗಂಡಿನ ಉಭಯ ಕಡೆಯವರು ಸಮನಾಗಿ ಅರ್ಧರ್ಧ ಹಾಕುವರು. ಇದು ಇಂದು ಮುಂದುವರಿದ ಸಮಾಜದಲ್ಲಿ ಖರ್ಚು ವೆಚ್ಚಗಳು ಎರಡು ಕಡೆಯಲ್ಲಿ ಬೇರೆ ಬೇರೆಯೇ ಆಗಿ ಹೆಚ್ಚಿಗೆ ಆಗುವ ಬದಲು ಒಂದೇ ಕಡೆಯಿಂದಾಗಿ ಕಡಿಮೆ ಖರ್ಚಾಗುವುದು ಬಹಳಷ್ಟು ಒಳ್ಳೆಯದು. ಇದು ಸಮಾಜದ ಕಟ್ಟಡಗಳಲ್ಲಿ ನಡೆಯುವ ದಂಪತಿ ಮುಹೂರ್ತವಾಗುವುದು. ಇದು ಉತ್ತಮ ಕ್ರಮವಾಗಿದೆ.

**ಗೌಡರ ವಿವಾಹ ಪದ್ಧತಿಯಲ್ಲಿ ಕೂಡಾವಳಿ ಸಂಪ್ರದಾಯ :**

ಗೌಡರ ವಿವಾಹ ಪದ್ಧತಿಯಲ್ಲಿ ಕೂಡಾವಳಿಯು ಒಂದು. ಇದು ಪುನರ್ ವಿವಾಹ/ವಿಧವಾ ವಿವಾಹ ಎಂದು ಹೇಳುವುದಕ್ಕಿಂತಲೂ ಭಿನ್ನವಾದುದು. ಗಂಡಾಗಲಿ, ಹೆಣ್ಣಾಗಲಿ ತನ್ನ ಸಂಸಾರದ ಬಾಳಿನಲ್ಲಿ ದುರಂತ ಕಂಡು ಅವರು ಏಕಾಂಗಿಯಾದರೆ ಅವರಿಗೆ ಅಂತಹವರೇ ಆದವರೊಂದಿಗೆ ಆಗುವ ವಿವಾಹಕ್ಕೆ "ಕೂಡಾವಳಿ" ಎಂದು ಹೇಳುವರು.

ಇಲ್ಲಿ ಅವಿವಾಹಿತ ಹೆಣ್ಣಿನೊಂದಿಗೆ ವಿವಾಹಿತನೊಬ್ಬ ಪತ್ನಿ ವಿಯೋಗದಿಂದ ಅವನ ಯೌವ್ವನಾವಸ್ಥೆಯಲ್ಲಿ ವಿಧುರನಾದರೆ ಕನ್ಯೆ ಹೆಣ್ಣಿನೊಂದಿಗೆ ವಿವಾಹವಾಗಬಹುದು. ಹಾಗೇ ಆಗುವ ವಿವಾಹಕ್ಕೆ "ಪುನರ್ ವಿವಾಹ" ಎಂದು ಹೇಳಬಹುದು. ಹೆಣ್ಣಿಗೆ ಇದು ಮೊದಲ ಧಾರೆ ವಿವಾಹವಾದ ಕಾರಣ ಇದನ್ನು ವಿವಾಹವೆಂದು ಪರಿಗಣಿಸುವರು. ಹಾಗೆಯೇ ಹೆಣ್ಣೊಬ್ಬಳು ಪತಿಯ ವಿಯೋಗದಿಂದ ವಿಧವೆಯಾಗಿ ಯೌವ್ವನಾವಸ್ಥೆಯಲ್ಲಿದ್ದರೆ, ಅವಿವಾಹಿತ ಗಂಡಿನೊಂದಿಗೆ ವಿವಾಹವಾಗಬಾರದು. ಕಾರಣ ಹೆಣ್ಣಿಗೆ ಎರಡನೆಯ ಧಾರೆಯಿಲ್ಲ. ಗಂಡೇ ಆಗಲಿ, ಹೆಣ್ಣೇ ಆಗಲಿ ಧಾರಾ ವಿವಾಹವಾಗದೆ ಮೋಕ್ಷವಿಲ್ಲವೆಂದು ಹೇಳುವುದು ವಾಡಿಕೆ. ಪತಿಯ ವಿಯೋಗದಿಂದ ಯೌವ್ವನಾವಸ್ಥೆಯಲ್ಲಿರುವ ವಿಧವೆಯನ್ನು ತನ್ನ ಬಾಳ ಸಂಗಾತಿಯಾಗಿ ಆರಿಸಿ, ಅವಿವಾಹಿತನೊಬ್ಬ ಇಷ್ಟಪಟ್ಟರೆ ಅದು ವಿವಾಹವಾಗಲಾರದು, ಬದಲು ಕೂಡಾವಳಿ ಎಂದೇ ಕರೆಯುವರು. ಯಾವ ಒಂದು ವಿವಾಹವು ಧಾರೆ ಕಾರ್ಯಕ್ರಮವಿಲ್ಲದೆ ನಡೆಯುವುದೋ ಅದು "ಕೂಡಾವಳಿ" ಆಗುವುದು. ಇಲ್ಲಿ ಧಾರೆಯು ಹೆಣ್ಣಿಗೆ ತನ್ನ ಜೀವನದಲ್ಲಿ ಒಂದು ಬಾರಿಯು, ಗಂಡಿಗೆ ಒಂದಕ್ಕಿಂತ ಹೆಚ್ಚು ಬಾರಿಯು ಇರುವುದರಿಂದ ಧಾರೆ ಎಂಬ ಸಂಪ್ರದಾಯದಲ್ಲಿ ಬರುವ ಶಾಸ್ತ್ರದ ಶ್ರೇಷ್ಠತೆಯನ್ನು ಕಾಪಾಡಿರುವುದು ಹೆಣ್ಣು ಮಾತ್ರ. ಆದುದರಿಂದ ಒಮ್ಮೆ ಧಾರೆ ವಿವಾಹವಾದ ಹೆಣ್ಣನ್ನು ಯಾರೇ ಸಂಗಾತಿಯಾಗಿ ಬಯಸಿದರೂ ಅದು ಕೂಡಾವಳಿಯೇ ಎಂದು ಮನದಟ್ಟಾಗುವುದು. ಕೂಡಾವಳಿಯು ವಿಧವೆಯಾದರೂ, ವಿಧುರನಾದರೂ ತನ್ನ ಜೀವನದ ಸುಗಮತೆಗೆ ಬಾಳ ಸಂಗಾತಿಗಳಾಗಿ ಆರಿಸಿಕೊಳ್ಳುವುದು ಎಂದು ತಿಳಿಯುವುದು.

ಕೂಡಾವಳಿಯಲ್ಲಿ ಬಾಳ ಸಂಗಾತಿಗಳನ್ನು ತಲೆಗೆ ಅಕ್ಕಿ ಹಾಕಿ ಆಶೀರ್ವದಿಸುವಂತಿಲ್ಲ. ಉಡುಗೊರೆ ಕೊಟ್ಟರೂ ದೀವಿಗೆಗೆ ಅಕ್ಕಿ ಹಾಕಿ ಕೂಡಾವಳಿಯಾದ ಸಂಗಾತಿಗಳು ಹಿರಿಯರ ಪಾದ ನಮಸ್ಕಾರ ಮಾಡುವಾಗ ಅವರಿಗೆ ಆಶೀರ್ವದಿಸುವುದು. ಕ್ರಮ ಕೂಡಾವಳಿಯಲ್ಲಿ ಗಂಡು ಹೆಣ್ಣಿಗೆ ಕಾಲುಂಗುರ, ಸೀರೆ, ರವಿಕೆ ಮಾತ್ರ ಕೊಡುವುದು. [ಬಣ್ಣ ಬಂಗಾರವಿಲ್ಲ] ಹೆಣ್ಣು ಸ್ನಾನ ಮಾಡಿ ಗಂಡು ಕೊಟ್ಟ ಉಡುಪಿನಿಂದ ಅಲಂಕೃತಳಾಗಿ ನೆಲ್ಲಕ್ಕಿ ಅಡಿಗೆ ಬರುವುದು. ಅಲ್ಲಿ ಊರುಗೌಡರು/ಮುಖ್ಯಸ್ಥರು ಹತ್ತು ಕುಟುಂಬ ಹದಿನೆಂಟು ಗೋತ್ರದ ಒಕ್ಕಣೆ ಹೇಳಿ, ಒಕ್ಕಲೆಜ ಮಾನರಿಗೆ ಗಂಡಿನ ಕಡೆಯಿಂದ ಮೊದಲ ಕೂಡಾವಳಿಯಾದರೆ 2–25 ರೂ.ಗಳ ತೆರವಿನ ಹಣವನ್ನೂ, ಎರಡನೆಯ ಕೂಡಾವಳಿಯಾದರೆ 1–25 ರೂಪಾಯಿಯನ್ನು ತೆರವಿನ ಹಣವಾಗಿ ಕೊಡಿಸಿ, ಮೂರನೆಯದಾದರೆ ತೆರವಿನ ಹಣವಿಲ್ಲದೆ ಕೇವಲ ಬಿಳಿ ಸೀರೆಯನ್ನು ಮಾತ್ರ ಕೊಡುವುದು. ತದನಂತರ ಸರ್ವರ ಒಪ್ಪಿಗೆ ಪಡೆದು ಗಂಡಿನಿಂದ ಹೆಣ್ಣಿಗೆ ತಾಳಿ ಕಟ್ಟಿಸುವುದು. [ಪುಷ್ಪಮಾಲಿಕೆಗಳನ್ನು ಹಾಕುವಂತಿಲ್ಲ, ಹತ್ತು ಕುಟುಂಬ ಹದಿನೆಂಟು ಗೋತ್ರ ಒಕ್ಕಣೆ ಹೇಳಬಹುದು]

ಗಂಡು ಹೆಣ್ಣನ್ನು ತನ್ನ ಮನೆ ಹತ್ತಿಸಿಕೊಳ್ಳುವಾಗಲೂ ಯಾವುದೇ ತರಹದ ಶಾಸ್ತ್ರಗಳಿಲ್ಲ. ತುಪ್ಪ ತೆಗೆದುಕೊಂಡು ಹೋಗುವುದು ಹತ್ತು ಉಳಿಯುವುದು, ಆಟಿಯ ಕ್ರಮ, ಇದು ಯಾವುದೂ ಕೂಡಾವಳಿಯಲ್ಲಿ ಬರುವುದಿಲ್ಲ.

ಕೂಡಾವಳಿ ಸಂಪ್ರದಾಯವು ಗೌಡ ಜನಾಂಗದಲ್ಲಿ ನಡೆದು ಬರುತ್ತಿದೆ. ಇದು ಧರ್ಮಕ್ಕೆ ಅನುಗುಣವೂ ಆಗಿದೆ. ಇದರಲ್ಲಿ ಯಾವುದೇ ಶಾಸ್ತ್ರವು ಕಂಡುಬಾರದಿದ್ದರೂ ಶಾಸ್ತ್ರವು ಧರ್ಮದ ಒಂದು ಅಂಗದಂತೆ, ಕೂಡಾವಳಿಯು ಸಂತ ಧರ್ಮದ ಒಂದು ಅಂಗವೆಂದೇ ತಿಳಿಯುವುದು. ಶಾಸ್ತ್ರವಿಲ್ಲದ ಸಂಪ್ರದಾಯವೆಂದು ಸಮಾಜದಲ್ಲಿ ಇದಕ್ಕೆ ಮಾನ್ಯತೆ ಕಡಿಮೆಯಾಗಕೂಡದು. ಮಾನವನ ಜೀವನದ ಸುಗಮತೆಗೆ ಕೂಡಾವಳಿ ಸಂಪ್ರದಾಯದ ಅಗತ್ಯವಿದೆ. ಆದುದರಿಂದ ಸಂಪ್ರದಾಯದಂತೆ ನಡೆಯುವ ಈ ಕೂಡಾವಳಿಗೂ ಹಿಂದೂ ಸಮಾಜದ ಇತರ ಕೆಲವು ಜನಾಂಗದವರು ಕೂಡಾ ಮಾನ್ಯತೆಯನ್ನು ನೀಡಿರುವರು. O

ಕೃಪೆ : ಕೊಡಗು ಗೌಡ ವಿದ್ಯಾಸಂಘ, ಮಡಿಕೇರಿ.

## ನುಡಿಮುತ್ತು

ಒಳ್ಳೆಯ ಕೆಲಸಗಳನ್ನು ಮಾಡಲು ಚಿಂತಿಸದೆ, ಅವುಗಳನ್ನು ಮುಂದೂಡದೇ ಕೂಡಲೇ ಮಾಡಿ ಮುಗಿಸಿಬಿಡಿ.

—.ಅರವಿಂದ

## ಅಂದು—ಇಂದು

ಓ ಕಾಲವೇ—

ಅಂದು ನಾನು ನಿನ್ನೊಂದಿಗೆ ಕಳೆದ ಹೊತ್ತು ಗೊತ್ತೆಷ್ಟು ನಿನಗೆ
ಇಂದು ನಾನು ಬೆಳೆದೆ ನೀನು ಗತಿಸಿದೆ
ಅಂದು ಮುಗ್ಧನಾಗಿದ್ದೆ, ಸ್ನೇಹಮಯಿಯಾಗಿದ್ದೆ ನಿಸ್ವಾರ್ಥಿಯಾಗಿದ್ದೆ
ಇಂದು ಆಗಿರುವೆ ನಾನು ಸ್ವಾರ್ಥಿ ದ್ವೇಷದ ಮೂರ್ತಿ
ಅಂದು ವಿದ್ಯೆಯೇ ವಿನಯದ ಮೂಲ ಎಂದು ತಿಳಿದಿದ್ದೆ
ಇಂದು ಅದ ಪಡೆದು ಅಹಂಕಾರಿಯಾಗಿರುವೆ ಮೂರ್ಖನಾಗಿರುವೆ
ಅಂದು ವಿಜ್ಞಾನದಿಂದ ಅಜ್ಞಾನವನ್ನು ಹೊಡೆದೋಡಿಸಬಹುದೆಂದು ನಂಬಿದ್ದೆ
ಇಂದು ನನಗೆ ಗೊತ್ತು ಅದರಿಂದ ಹೇಗೆ ನಾಶಪಡಿಸಬಹುದೆಂದು
ಅಂದುಬಡತನವಿದ್ದರೂ, ಸಂತೃಪ್ತಿಯಿತ್ತು, ಭಾವೈಕ್ಯತೆಯಿತ್ತು ನೆಮ್ಮದಿಯಿತ್ತು
ಇಂದು ಸಂಪತ್ತು ಕೂಡಿ ಹಾಕುವುದು ಹೇಗೆಂದು ನನಗೆ ಗೊತ್ತು
ಅಂದು ನಾನು ಬಯಸಲಿಲ್ಲ ದ್ವೇಷ, ಸ್ವಾರ್ಥ
ಇಂದು ನಾನು ಬೇಡುತಿರುವೆ ಶಾಂತಿ ಆಗಿರುವುದು ನನಗೆಭ್ರಾಂತಿ
ಅಂದು ನಾನು ಶುಭ್ರವಾಗಿದ್ದೆ, ಸ್ವಚ್ಛನಾಗಿದ್ದೆ, ಆರೋಗ್ಯದಿಂದ ಇದ್ದೆ
ಇಂದು ನಾನಾಗಿರುವೆ ಮೈಲಿಗೆ, ಅಂಟಿಸಿಕೊಂಡಿರುವೆ ಮಹಾವ್ಯಾಧಿ
ಅಂದು ನಾನು ತಿಳಿದಿದ್ದೆ ನಾವೆಲ್ಲಾ ಒಂದು ಎಂದು
ಇಂದು ನನಗೆ ಗೊತ್ತಾಗಿದೆ ಒಂದರಿಂದ ಏನಾಗುವುದಿಲ್ಲವೆಂದು.

—ಜ್ಞಾನೇಶ್ ನಿಡ್ಯಮಲೆ, ಮಡಿಕೇರಿ.

## ನಗೆ ಹನಿಗಳು

ಪತ್ರಕರ್ತ : "ನೀವು ಪ್ರೇಕ್ಷಕರ ಹೃದಯದಲ್ಲಿ ವಾಸಿಸಬೇಕೆಂದಿದ್ದೀರಾ ?"

ನಟಿ : "ಅಯ್ಯೋ ಇಲ್ಲ...ನಾನು ಈಚೆಗೆ ಕೊಂಡ ಪ್ಲಾಟ್‌ನಲ್ಲಿ ವಾಸಿಸಬೇಕೆಂದಿದ್ದೇನೆ"

O O O

ಗೆಳೆಯ : "ಅಲ್ಲಯ್ಯಾ, ಎಲ್ಲಾ ಬಿಟ್ಟು ನೀನು ಚರ್ಮ ವೈದ್ಯನಾದದ್ದು ಏಕೆ ?"

ವೈದ್ಯ : "ಯಾವ ರೋಗಿಯೂ ಮಧ್ಯರಾತ್ರಿಯಲ್ಲಿ ಎಬ್ಬಿಸುವುದಿಲ್ಲ."

# ಎನ್. ಎಸ್. ದೇವಿಪ್ರಸಾದ್‌ರವರ ಕೈ ಬಲಪಡಿಸಲು ಕೊಡಗಿನ ಯುವಕರಿಗೆ ಪ್ರೊ|| ಪೂಜಾರಿ ಮೊಣ್ಣಪ್ಪನವರ ಕರೆ

ಲೇಖನ : ಪ್ರೊ|| ಪೂಜಾರಿ ಮೊಣ್ಣಪ್ಪ ಬೆಂಗಳೂರು

ಒಂದು ಸಮಾಜದಲ್ಲಿ ಯಾ ಪ್ರಾಂತ್ಯದಲ್ಲಿ ಕೆಲವು ಘಟನೆಗಳು ಆಗಿಹೋದವುಗಳನ್ನು ಸಾಮಾನ್ಯ ಜನರಿಗೆ ಗೊತ್ತುಪಡಿಸುವ ಕೆಲಸವನ್ನು ಪ್ರಜ್ಞಾವಂತ ಜನರು ಮಾಡುತ್ತಾರೆ. ಅಂಥವರಲ್ಲಿ ಶ್ರೀ ಸಂಪಾಜೆ ದೇವಿಪ್ರಸಾದ್‌ರವರು ಒಬ್ಬರು. 1857 ರಲ್ಲಿ ಭಾರತದಲ್ಲಿ ಸಿಪಾಯಿದಂಗೆಯನ್ನು ಮೊತ್ತಮೊದಲಿನ ಸ್ವಾತಂತ್ರ್ಯ ಸಂಗ್ರಾಮವೆಂದು ಚರಿತ್ರೆಕಾರರು ಕಂಡಿದ್ದರೆ ಆ ಚರಿತ್ರೆಕಾರರಿಗೆ 1837 ರಲ್ಲಿ ಕೊಡಗು ಮತ್ತು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ನಡೆದ ಅಮರ ಸುಳ್ಯ ಕಾಟಕಾಯಿಯನ್ನು ಚರಿತ್ರೆಯ ಪುಟದಿಂದ ಬಿಟ್ಟು ಹಾಕಿದ್ದಾರೆ. ಬ್ರಿಟೀಷರ ಕಾಲದ ಚರಿತ್ರೆಕಾರರು ಬ್ರಿಟೀಷರಿಗೆ ಹೆದರಿ ಇದನ್ನು ದರೋಡೆಕೋರರ ಬಂಡು ಎಂದು ಕರೆದಿದ್ದಾರೆ. ಸ್ವಾತಂತ್ರ್ಯದ ನಂತರವೂ ಕೆಲವು ಕಾರಣಗಳಿಂದ ಬ್ರಿಟೀಷರ ಕಾಲದ ಚರಿತ್ರೆಕಾರರ ಜಾಡನ್ನೇ ಹಿಡಿದಿದ್ದಾರೆ. ಈ ರೀತಿ ಅಲ್ಲವೆಂಬುದನ್ನು ನಮ್ಮ ಈಗಿನ ಪೀಳಿಗೆಗೆ ಮನವರಿಕೆ ಮಾಡಲು ಶ್ರೀ ದೇವಿಪ್ರಸಾದ್‌ರವರು ತಮ್ಮ ಸ್ವಂತ ಖರ್ಚಿನಿಂದ ಬ್ರಿಟೀಷರ ಕಾಲದ ದಾಖಲೆಗಳನ್ನು ಒದಗಿಸಲು ಹಿಂದಿನ ಮದ್ರಾಸ್ [ಚೆನ್ನೈ]ಗೆ ಸ್ವತಃ ಹೋಗಿ ಅಲ್ಲಿನ ಸರ್ಕಾರಿ ಆರ್ಕೆವಿಸ್‌ನ [ದಾಖಲೆಗಳ ಕಾರ್ಯಾಗಾರ] ಸಂಬಂಧಪಟ್ಟ ಅಧಿಕಾರಿಗಳನ್ನು ಭೇಟಿ ಮಾಡಿ 1837 ರಲ್ಲಿ ನಡೆದ ಅಮರ ಸುಳ್ಯ ಕಾಟಕಾಯಿಯ ವಿಷಯದಲ್ಲಿ ಮಂಗಳೂರಿನ ಕಲೆಕ್ಟರ್ ತಯಾರಿಸಿದ ವರದಿ, [Coorg Gaze-ttear] ಮತ್ತು ಇನ್ನಿತರ ಚಾರಿತ್ರಿಕ ದಾಖಲೆಗಳ ಆಧಾರದ ಮೇಲೆ ಅಮರ ಕ್ರಾಂತಿ ಉತ್ಸವವನ್ನು 1998ನೇ ಇಸವಿ ಮಾರ್ಚ್ 30 ರಿಂದ ಏಪ್ರಿಲ್ 5 ರವರೆಗೆ ಆಚರಿಸಲು ಶ್ರಮಪಟ್ಟು ಮಾರ್ಚ್ 30 ರಲ್ಲಿ ಸುಳ್ಯದಿಂದ ಹೊರಟು ಕಾಲು ನಡಿಗೆಯಲ್ಲೇ ಬೆಳ್ಳಾರೆ, ಮಾಣಿ, ಪುತ್ತೂರು, ನಂದಾವರ, ಜೋಡು ಮಾರ್ಗದ ಮಾರ್ಗವಾಗಿ ಮಂಗಳೂರಿಗೆ ತಲುಪಿ ಅಲ್ಲಿನ ಬಾವುಟ ಗುಡ್ಡೆಯಲ್ಲಿ 161 ವರ್ಷಗಳ ಹಿಂದೆ ಅಂದರೆ 1837 ರಲ್ಲಿ ಕಲ್ಯಾಣ ಸ್ವಾಮಿ ಕೊಡಗು ನಾಡಿನ ಬಾವುಟವನ್ನು ಬ್ರಿಟೀಷರ ಯೂನಿಯನ್ ಜಾಕ್ ಬಾವುಟವನ್ನು ಕಿತ್ತೊಗೆದು ಬಾವುಟ ಹಾರಿಸಿದಂತೆ ಶ್ರೀ ದೇವಿಪ್ರಸಾದ್‌ರವರು ಬಾವುಟವನ್ನು ಹಾರಿಸಿದರು. ಅಲ್ಲದೆ 30ನೇ ಮಾರ್ಚಿನಿಂದ 5ನೇ ಏಪ್ರಿಲ್‌ನವರೆಗೆ ಮೇಲೆ ಕಾಣಿಸಿದ ಮಾರ್ಗವಾಗಿ ನಡೆದು ಸಂಜೆಯಾದಾಗ ಅಲ್ಲಿ ಅಮರ ಕ್ರಾಂತಿಯ ವಿಷಯಗಳ ಬೀದಿ ನಾಟಕಗಳನ್ನು ಅಭಿನಯಿಸಿ ಜನರಿಗೆ 1837ರ ಸ್ವಾತಂತ್ರ್ಯ ಸಂಗ್ರಾಮದ ಪರಿಚಯ ಮಾಡಿಕೊಡಲು ಶ್ರಮಿಸಿದ್ದಾರೆ. ಇದೆಲ್ಲಾ ಕೆಲಸ ಯಾಕೆ ? ಯಾರಿಗಾಗಿ ? ಏತಕ್ಕಾಗಿ ? ನಮ್ಮ ಹಿರಿಯರು ವೀರರು ಮಾಡಿದ ಪ್ರಾಣ ತ್ಯಾಗವನ್ನು ಸ್ಮರಿಸುವುದಕ್ಕಾಗಿ ಅವರ ತ್ಯಾಗದ ಫಲವನ್ನು ಅನುಭವಿಸುತ್ತಿರುವ ಈಗಿನ ಪೀಳಿಗೆಗೆ ತಿಳಿಸಲು ಇದೆಲ್ಲಾ ಪ್ರಯತ್ನ. ಆದ್ದರಿಂದ ಶ್ರೀ ದೇವಿಪ್ರಸಾದ್‌ರವರಿಗೆ ಇರುವ ದೇಶಭಕ್ತಿ ಎಷ್ಟರ ಮಟ್ಟಿಗೆ ಇದೆ ಎಂಬುದನ್ನು 1998 ರಲ್ಲಿ ಆಚರಿಸಿದ ಅಮರ ಕ್ರಾಂತಿ ಉತ್ಸವವೇ ಸಾಕ್ಷಿ. ಈ ವಿಷಯವನ್ನು ಮಂಗಳೂರು ಟುಡೆ ಎಂಬ ಪತ್ರಿಕೆ 1998ರ ಮೇ ತಿಂಗಳ ಸಂಚಿಕೆಯಲ್ಲಿ ಪ್ರಾಮುಖ್ಯವಾದ ಘಟನೆಗಳ ಚಿತ್ರಗಳ ಮೂಲಕ ನಾಲ್ಕು ಪುಟಗಳಲ್ಲಿ ಪ್ರಕಟಿಸಿದೆ. ಈ ಸಮಾಚಾರವನ್ನು ಓದಿದಾಗ ಪ್ರತಿಯೊಬ್ಬರ ಮೈಮನಸ್ಸಿನಲ್ಲಿ ದೇಶಭಕ್ತಿಯ ಚೇತನ ಹೊರ ಹೊಮ್ಮುವುದಲ್ಲದೆ ನಮ್ಮ ಹಿರಿಯರ ತ್ಯಾಗ ಮನೋಭಾವವನ್ನು ಕೊಂಡಾಡುವಂತಾಗುತ್ತದೆ.

ಈ ಅಮರ ಕ್ರಾಂತಿಯ ವಿಷಯದಂತೆಯೇ ಇನ್ನೊಂದು ಮಹಾ ಕಾರ್ಯವನ್ನು ಕೈಗೆತ್ತಿಕೊಂಡಿದ್ದಾರೆ. ಅದೇ ಅವರು ಸ್ಥಾಪಿಸಿರುವ ಕೊಡಗು ಪ್ರಜಾವೇದಿಕೆ ಎಂಬ ಸಂಸ್ಥೆ. ಶ್ರೀ ದೇವಿಪ್ರಸಾದ್‌ರವರು ಬೆಂಗಳೂರಿಗೆ ಬಂದಿದ್ದಾಗ ಅವರನ್ನು ಈ ವಿಷಯದಲ್ಲಿ ಕೆಲವು ಪ್ರಶ್ನೆಗಳನ್ನು ಕೇಳಿದೆ.

1. ನೀವು ಸ್ಥಾಪಿಸಿರುವ ಪ್ರಜಾವೇದಿಕೆ-ಜಾತಿವಾದದ ವೇದಿಕೆ ಎಂದು ಕೆಲವರು ಆಡಿಕೊಳ್ಳುತ್ತಿದ್ದಾರೆ ಅದು ನಿಜವೆ ?

ಉತ್ತರ : ಕೊಡಗು ಪ್ರಜಾವೇದಿಕೆ ಯಾವುದೇ ಒಂದು ಜಾತಿ ಯಾ ಕೋಮಿನಿಂದ ಕೂಡಿದ ವೇದಿಕೆ ಅಲ್ಲ. ಈ ವೇದಿಕೆಯಲ್ಲಿ ಲಿಂಗಾಯಿತ ಸಮಾಜದ ಅಧ್ಯಕ್ಷರಿದ್ದಾರೆ. ಅಮ್ಮ ಕೊಡವ ಸಮಾಜದ ಅಧ್ಯಕ್ಷರಿದ್ದಾರೆ. ಐರಿ ಸಮಾಜದ ಅಧ್ಯಕ್ಷರಿದ್ದಾರೆ, ಹೆಗ್ಗಡೆ ಸಮಾಜದ ಅಧ್ಯಕ್ಷರಿದ್ದಾರೆ. ಇನ್ನೂ ಹಲವಾರು ಸಮಾಜಗಳ ಅಧ್ಯಕ್ಷರಿದ್ದಾರೆ. ಇದಲ್ಲದೆ ಮುಸಲ್ಮಾನ್, ಕ್ರೈಸ್ತ ಸದಸ್ಯರೂ ಇದ್ದಾರೆ. ಹೀಗಿರುವಾಗ ಇದು ಜಾತಿವಾದದ ವೇದಿಕೆ ಎಂದು ಕರೆಯುವುದು ಪಟ್ಟಭದ್ರ ಹಿತಾಸಕ್ತಿ

ಗಳ ಭಾವನೆ ಹೊರತು ಬೇರೇನೂ ಅಲ್ಲ.

2. ನೀವು ಏಕೆ ಕೊಡಗು ಪ್ರತ್ಯೇಕ ರಾಜ್ಯವಾಗುವುದಕ್ಕೆ ವಿರೋಧಿಸುತ್ತೀರಿ ?

ಉತ್ತರ : 1952ರಲ್ಲಿ ಪ್ರತ್ಯೇಕ ಪಕ್ಷವನ್ನು ಜನ ಸೋಲಿಸಿದ್ದರು. 24 ಶಾಸಕರಲ್ಲಿ ಪ್ರತ್ಯೇಕ ಪಕ್ಷದ ನಾಯಕ ಪಂದ್ಯಂಡ ಬೆಳ್ಯಪ್ಪನವರೂ ಸೇರಿದಂತೆ 22ಶಾಸಕರು 1956ರಲ್ಲಿ ಕರ್ನಾಟಕದೊಂದಿಗೆ ವಿಲೀನವಾಗುವಂತೆ ಕೊಡಗು ವಿಧಾನ ಸಭೆಯಲ್ಲಿ ಮತ ನೀಡಿದ್ದಾರೆ. ಅಂದೇ ಸತ್ತು ಹೋದ ಪ್ರತ್ಯೇಕವಾದವನ್ನು ಮತ್ತೆ ಜೀವಂತಗೊಳಿಸುವುದು ಸರಿಯಲ್ಲ. ಇದಕ್ಕೆ ಜನ ಬೆಂಬಲ ಇಲ್ಲ. ಇತರ ಜಿಲ್ಲೆಯ ಜನ ಕೊಡಗಿನವರನ್ನು ದ್ವೇಷಿಸಲು ಈ ಪ್ರತ್ಯೇಕವಾದ ಕಾರಣವಾಗಬಹುದು. ಪ್ರತ್ಯೇಕವಾದಕ್ಕೆ ಕೊಡಗಿನೊಳಗೆ ಪ್ರಬಲ ವಿರೋಧ ಇದೆ ಎನ್ನುವುದು ಗೊತ್ತಾದ ಮೇಲೆ ಹೊರ ಜಿಲ್ಲೆಯವರ ಅಭಿಪ್ರಾಯ ಸಾಕಷ್ಟು ಬದಲಾಗಿದೆ.

ಆದುದರಿಂದ ಕೊಡಗಿನ ಜನರ ಹಿತರಕ್ಷಣೆಗಾಗಿ ಈ ಹೋರಾಟ ಪ್ರಾರಂಭಿಸಿದ್ದೇವೆ. ಇದರಲ್ಲಿ ಯಾವ ಜಾತಿವಾದವೂ ಇಲ್ಲವೆಂದು ಸ್ಪಷ್ಟಪಡಿಸಿದ್ದಾರೆ.

ಆದುದರಿಂದ ಶ್ರೀ ದೇವಿಪ್ರಸಾದ್‌ರವರು ಒಬ್ಬ ಸಮಾಜ ಸೇವಾ ಧುರೀಣರು. ಇವರು ಮಾಡುತ್ತಿರುವ ಕೆಲಸ ನಮ್ಮ ಜಿಲ್ಲೆಯ ಅಭಿವೃದ್ಧಿಯತ್ತ ಗಮನ ಸೆಳೆಯುತ್ತಿದ್ದಾರೆಯೇ ಹೊರತು ಯಾವ ವಿಧದ ರಾಜಕೀಯ ಲಾಭದ ದುರುದ್ದೇಶವಿಲ್ಲವೆಂಬುದು ಸ್ಪಷ್ಟವಾಗುತ್ತಿದೆ. ಇವರೊಬ್ಬ ಅಪರೂಪ, ವಿಭಿನ್ನ ರೀತಿಯ ಸಾಮಾಜಿಕ ಅಭಿವೃದ್ಧಿಯತ್ತ ಧೈರ್ಯವಾಗಿ ಜಿಲ್ಲೆಯ ಸಾಮಾನ್ಯ ಜನರ ಕಲ್ಯಾಣಕ್ಕಾಗಿ ತನ್ನ ಧ್ಯೇಯ ಸಾಧನೆಗಾಗಿ, ದುಡಿಯುವ ವ್ಯಕ್ತಿಯಾಗಿದ್ದಾರೆ. ಇದಕ್ಕೆ ಯಾರೂ ಜಾತಿವಾದದ ಬಣ್ಣ ಹಾಗೂ ರಾಜಕೀಯ ಬಣ್ಣ ಹಚ್ಚಬಾರದು. ಪ್ರಜಾವೇದಿಕೆಯಂತಹ ಸಂಘಟನೆ ಖಂಡಿತವಾಗಿಯೂ ಕರ್ನಾಟಕ ಸರ್ಕಾರದ ಅಸಡ್ಡೆ ಭಾವನೆಯನ್ನು ಕಿತ್ತೊಗೆದು ಜಿಲ್ಲೆಗೆ ಬೇಕಾದ ಅಭಿವೃದ್ಧಿ ಕೆಲಸಗಳನ್ನು ತುರ್ತುಗೊಳಿಸುವುದಕ್ಕೆ ಈ ವೇದಿಕೆಯ ಹೋರಾಟ ಜಿಲ್ಲೆಗೆ ಶುಭವಾಗುವುದೆಂದು ನನ್ನ ಅನಿಸಿಕೆ. ಶ್ರೀ ದೇವಿ ಪ್ರಸಾದ್‌ರವರು ಶ್ರೀ ಕಾವೇರಿ ಮಾತೆಯ ಪ್ರಸಾದವೆಂದು ನನ್ನ ಅನಿಸಿಕೆ. ಕಾರಣವೇನೆಂದರೆ ಯಾವುದೇ ಪ್ರತಿಫಲ, ಆಕಾಂಕ್ಷೆ ಇಲ್ಲದೆ ಹೋರಾಟ ಮಾಡುವ ವ್ಯಕ್ತಿಗಳು ಎಷ್ಟು ಜನರಿದ್ದಾರೆ ಈ ಸಮಾಜದಲ್ಲಿ? ಆದುದರಿಂದ ಜಾತ್ಯಾತೀತವಾದ ರಾಜಕೀಯ ಲಾಭಕ್ಕೆ ಆಸೆ ಪಡದೆ ಕೊಡಗಿನ ಶ್ರೇಯಸ್ಸಿಗಾಗಿ, ಅಭಿವೃದ್ಧಿಗಾಗಿ ನಮ್ಮ ಪೀಳಿಗೆಯ ಉದ್ಧಾರಕ್ಕಾಗಿ ಕೊಡಗು ಪ್ರಜಾವೇದಿಕೆಗೆ ನಾವೆಲ್ಲಾ ಪ್ರೋತ್ಸಾಹಿಸೋಣ ಎಂದು ನನ್ನ ವ್ಯಕ್ತಿಗತ ಅಭಿಪ್ರಾಯ. ○

## ಕ್ರೀಡೆಯಲ್ಲಿ ಕೀರ್ತಿ ತಂದ ಅನಿತ



ಇದೇ ಜನವರಿ 5 ರಿಂದ 7ರ ತನಕ ನಡೆದ ರಾಜ್ಯಮಟ್ಟದ ಅಥ್ಲೆಟಿಕ್ಸ್ ಕೂಟದ 100X4 ಮೀ. ಓಟದ ಸ್ಪರ್ಧೆಯಲ್ಲಿ ಅನಿತ ಎಂ.ಎನ್. ಇವಳು ಮೊದಲಿಗಳಾಗಿ ಬಂದು ಕೀರ್ತಿ ತಂದಿದ್ದಾಳೆ. ಇವಳು ಈ ಹಿಂದೆ ಪ್ರಾಥಮಿಕ ಮತ್ತು ಮಾಧ್ಯಮಿಕ ಶಾಲಾ ವಿದ್ಯಾರ್ಥಿನಿಯಾಗಿದ್ದಾಗಲೂ ಜಿಲ್ಲಾ ಮತ್ತು ರಾಜ್ಯಮಟ್ಟದಲ್ಲಿ ಹಲವಾರು ಪದಕಗಳನ್ನು ಪಡೆದಿದ್ದಾಳೆ. ಈಗ ಈಕೆ ಕೃಷ್ಣರಾಜ ನಗರದ ಶ್ರೀ ಟಿ. ಮರಿಯಪ್ಪ ಪದವಿ ಪೂರ್ವ ಕಾಲೇಜಿನಲ್ಲಿ ದ್ವಿತೀಯ ಪಿ.ಯು.ಸಿ. ವಿದ್ಯಾರ್ಥಿನಿಯಾಗಿದ್ದಾಳೆ. ಇವಳು ಮೂಲತಃ ಭಾಗಮಂಡಲ ನಾಡು ಕೊಳಗದಾಳು ಗ್ರಾಮದ ಮುಕ್ಕಾಟಿ ನಂಜಪ್ಪ ಮತ್ತು ಗೋಪಮ್ಮ ದಂಪತಿಗಳ ಸುಪುತ್ರಿಯಾಗಿದ್ದಾಳೆ. ಇವಳ ಉಜ್ವಲ ಭವಿಷ್ಯಕ್ಕೆ ಕೊಡಗು ಸಂಗಾತಿ ಶುಭವನ್ನು ಹಾರೈಸುತ್ತದೆ.

## ಮನೆ ಮದ್ದು : ಒಂದೆಲಗ

[ತಿಮಾರೆ ಸೊಪ್ಪು]

ಇದರ ಹಸಿ ಸೊಪ್ಪಿನ ರಸನ ಮಜ್ಜಿಗೆ ಮತ್ತು ಹಾಲಿನೊಟ್ಟಿಗೆ ಔಷಧಿಯಾಗಿ ಉಪಯೋಗಿಸುವುದರಿಂದ ಬುದ್ಧಿಶಕ್ತಿ ಹೆಚ್ಚಿ ಮೆದುಳಿಗೆ ಸಂಬಂಧಪಟ್ಟ ಕಾಯಿಲೆಗಳನ್ನು ನಿವಾರಣೆ ಮಾಡುತ್ತದೆ. ಈ ಸೊಪ್ಪಿನ ರಸದಿಂದ ತೈಲವನ್ನು ಮಾಡಿ ಉಪಯೋಗಿಸುವುದರಿಂದ ತಲೆನೋವು, ಅರ್ಧ ತಲೆನೋವು, ನಿದ್ದೆ ಬಾರದಿರುವಿಕೆ ಮೆದುಳಿನ ದೌರ್ಬಲ್ಯ,ಕಣ್ಣುಉರಿ, ಅಧಿಕ ರಕ್ತದ ಒತ್ತಡ [ಹೈ. ಬಿ.ಪಿ] ಯಿಂದ ಉಂಟಾಗುವ ತಲೆ ಸುತ್ತುವಿಕೆ ನಿವಾರಣೆಯಾಗುತ್ತದೆ.

ಸಂಗ್ರಹ : ಪವನ್ ಶೋಭಾ ಪುಟ್ಟಣ್ಣ.
ಮೈಸೂರು.

**ಅರೆ ಭಾಷಿಕ ವಿಭಾಗ**

**ಧಾರಾವಾಹಿ–20**

**ಮೂಲಕಥೆ : ಅಶ್ವಥಿ ಅರವಿಂದ್**
**ಅರೆಭಾಷೆಗೆ : ಎಂ. ಇ. ಮಹಮ್ಮದ್**

# ಕರಿ ಚಿನ್ನ

ಕಳ್ದ ಸಂಚಿಕೆಲಿ...........

ರಂಜನ್ ಸೀದಾ ಗಾಳಿ ಮರ ಸೋಮಯ್ಯನ ಮನೆಗೆ ಹೋತ್. ಮನೆಲಿ ನೀಲು ಮಾತ್ರ ಇರ್ದು ನೋಡಿ ಕುಡಿಯಕೆ ಒಂದ್ ಗ್ಲಾಸ್ ನೀರ್ ಕೇಳ್ತ್. ನೀರ್ ತಾಕೆ ನೀಲು ಅಡಿಗೆ ಮನೆಗೆ ಹೋಕನ ರಂಜನ್ ಅಡಿಗೆ ಮನೆ ಬಾಗ್ಲ ಹಾಕಂಡ್ ಹಿಂದೆಂದ ಹೋಗಿ ಅವ್ಳನ ತಬ್ಬಿ ಹಿಡ್ಕಂಡದೆ. ಅಷ್ಟೊತ್ತಿಗೆ ಸರಿಯಾಗಿ ನೀಲುನ ಅಣ್ಣ ಚುಂಗುಮಣಿ ಅಲ್ಲಿಗೆ ಬಂದವೆ. ಬಂದಂವ ತನ್ನ ತಂಗೆನ ಶೀಲ ಕೆಡ್ಸಿಕೆ ನೋಡ್ದ ರಂಜನ್‌ಗೆ ಗೌರನ ಸಾಯ್ಸಿಕೆತ ತಂದ ಚಾಕ್‌ಲಿ ಚುಚ್ಚಿ ಕೊಲೆ ಮಾಡ್ದೆ. ಕೊಲೆ ಮಾಡಿ ಹೋಕಾಕನ ದಾರಿಲಿ ಬೋರ್‌ಗುಡ್ಡೆ ದೇವಯ್ಯ ಸಿಕ್ಕಿದೆ.

ಮುಂದೆ ಓದಿ..........

'ಅಂದಂಗೆ ನೀನ್ ಹೋಕನ ಮನೆಲಿ ಯಾರೂ ಇತ್ತ್‌ಲೆಯಾ ?' ದೇವಯ್ಯ ನೆಗಾಡಿಕಂಡೇ ಕೇಳ್ತ್.

'ಇಲ್ಲೆ'

'ಅವೆಲ್ಲ ಎಲ್ಲಿಗೆ ಹೋಗಿದ್ದೊ ?'

'ಅದ್ ನಂಗೇನ್ ಗೊತ್ತ್ ? ನೀವ್ ಅಂದ್ ಹೇಳ್ದ ಸಂಖ್ಯೆ ಬರ್ಲಿ.'

ಚಂಗುಮಣಿ ಆತುರಲಿ ಹೇಳ್ತ್.

'ಕೊಟ್ಟನೆ ಮಾರಾಯ, ನನ್ನ ನಿಂಗೆ ನಂಬಿಕೆ ಇಲ್ಲೆಯಾ ?'

ದೇವಯ್ಯ ಹೇಳ್ತ್.

ಹಣದ ವಿಷಯಲಿ ಹುಟ್ಟಿಸಿದ ಅಪ್ಪ ನಾದ್ರೂ ನಂಬಿಕೆ ಬೊತ್ತ್‌ೀತ ನೀವೇ ತಾನೆ ಅಂದೊಮ್ಮೆ ನಂಗೆ ಹೇಳಿ ಕೊಟ್ಟದ್ ?'

'ಅಲ್ಲಾ ಅದ್ ಸರಿ, ಈ ರಸ್ತೆ ಮಧ್ಯಲಿ ನಾನ್ ಹೆಂಗೆ ಹಣ ಕೊಡ್ಲಿ ಹೇಳ್ ?'

'ಅದೆಲ್ಲ ನಂಗೆ ಗೊತ್ತ್‌ಲೆ. ಕಾರ್ಯ ಆದ ಆ ಸೆಕೆಂಡ್‌ಲಿ ಹಣ ಕೊಡೊಕೂಂತ ನಾನ್ ಮೊದ್ಲೇ ಹೇಳಿಯೊಳೆ. ನೀವ್ ಒಪ್ಪಿಯೊಳರಿ. ಈಗ ಕಾರ್ ತಿರ್‌ಗ್ಸಿ ಬ್ಯಾಂಕಿಗೆ ಪೋಯಿ ಬನ್ನಿ'

ಚಂಗುಮಣಿ ಹೇಳ್ತ್.

ಅಲ್ಲ ಮಾರಾಯ ಇಸ್ಟ್ ದೂರ ಬಂದ್ ನಾನೊಮ್ಮೆ ಮನೆಗಂಟ್ ಹೋಗಿ ನೋಡಿ ಬಂದ್ ಬುಟ್ಟನೆ. ಅವಳ ಹೆಣನ ಒಮ್ಮೆ ಕಣ್ಣ್ ತುಂಬ ನೋಡೊಕು. ನೀನ್ ಯಾವ ಜಾಗಕೆ ಚಾಕ್ ಹಾಕಿಯೊಳ ? ಎಷ್ಟ್ ಸಲ ಹಾಕಿಯೊಳ, ರುಚಿ ನೋಡ್ದ ಮ್ಯಾಲೆ ಚುಚ್ಚಿದ್ದಾ ಅಲ್ಲ ದುಡ್‌ಕಿ ಬುಟ್ಟ್ ಮೊದ್ಲೆ ಕೊಂದ್ ಹಾಕಿ ಬುಟ್ಟೊಳಾ ಹೆಂಗೆ ?'

'ಹ್ಞಾ–ಇನ್ನೇನ್ ನೋಡೊಕೂಂತ ಆತ್. ಆದರೆ ಸಂದರ್ಭ ಸರಿ ಸಿಕ್ಕದ್ದರ್‌ಂದ ಮುಂದೇ ಚಾಕ್ ಹಾಕಿಬುಟ್ಟೆ. ಒಂದೇ ಸಾರಿ. ಹಿಂದೆಂದ ಸುಮಾರ್ ಆರಿಂಚದ್ ಚಾಕ್ ಹಿಡಿ ತನಕ ಒಳಗೆ ಹೋವುಟು. ನೀವ್‌ಗೆ ಇನ್ನೂ ನಂಬಿಕೆ ಬರದೇ ಹೋದ್ರೆ ನಾನ್ ತೋರ್ಸಿ ಕೊಟ್ಟನೆ ನೋಡಿ.'

ಚಂಗುಮಣಿ ತನ್ನ ಸೊಂಟಲಿ ಸಿಕ್ಸಿದ್ದ ಚಾಕ್‌ನ ತೆಗ್ದ್ ಬಿಡ್ಸಿ ತೋರ್ಸಿತ್. ಗಟ್ಟಿ ರಕ್ತ ಅದರ್ಲಿ ಅಂಟಿತ್ತ್.

'ನೋಡಿಯೊಳ್ರಾ...?'

'ನೀನ್ ಆ ಚಾಕ್‌ನ ಬೇಗ ತೆಗ್ದ್ ಜೋಬ್‌ಗೆ ಹಾಕ್.'

'ದೇವಯ್ಯ ಅತ್ತ ಇತ್ತ ನೋಡಿ ಬುಟ್ಟ್ ಮೆಲ್ಲೆ ಹೇಳ್ತ್.'

'ನೀವ್ ಕೊಡೋ ಹಣಲಿ ನಂಗೆ ಸೊಲ್ಪ ಗೌಜಿ ಮಾಡೊಕು, ಒಳ್ಳೆ ಡ್ರೆಸ್ ಹಾಕೊಕು. ಅದೆಲ್ಲ ಆದ ಮ್ಯಾಲೆ ನಾನ್ ಪೊಲೀಸರ ಕೈಗೆ ಸಿಕ್ಕುದು.'

ಚಾಕ್‌ನ ಮೊಡ್‌ಚಿಬುಟ್ಟ್ ಜೋಬಿಗೆ ಹಾಕ್ಕಂಡ್ ಚಂಗುಮಣಿ ಕಾರ್‌ಗೆ ಹತ್ತಿತ್.

ಸಂಗತಿ ನಡ್‌ತಲ್ಲಾಂತ ಕುಸಿಲಿ ದೇವಯ್ಯ ಕಾರ್ದ್ ಗೇರ್ ಚೇಂಜ್ ಮಾಡ್ತ್.

'ಸೊಲ್ಪ ಸ್ಪೀಡ್‌ಲಿ ಒಡ್ಸಿ ಸಾರ್, ಪೊಲೀಸ್‌ಗೆ ವಾಸನೆ ಸಿಕ್ಕಿಕೆ ಮುಂದೆ ನಾನ್ ಈ ಊರ್ ಬುಡೋಕು. ಜೈಲ್‌ಂದ ಬುಡ್‌ಗಡೆ ಆಗಿ ಬಂದಂದೇ ಪುನಾ ಜೈಲಿಗೆ ಹೋದೂತೇಳ್ರೆ ಅದ್ಯಾಕೋ ನಂಗೆ ಲಾಯ್ಕ ಕಾಂಬೊದ್ಲೆ'

ಚಂಗುಮಣಿ ಸಮಾಧಾನಲೇ ಹೇಳ್ತ್.

ಕಾರ್‌ನ ತಿರಿಗಿಸಿದ ದೇವಯ್ಯ ಸ್ಪೀಡ್‌ಲಿ ಓಡ್ಸಿತ್. ಕಾರ್ ಅವನ ಆಫೀಸ್‌ಗೆ ಎತ್ತಿತ್.

ಬೋರ್‌ಗುಡ್ಡೆ ದೇವಯ್ಯ ಚಂಗುಮಣಿನ ತನ್ನ ಕ್ಯಾಬಿನ್‌ಗೆ ಕರ್ತ್. ಅಲ್ಲಿ ಬಾಗ್ಲ ಹಾಕಿ ಬುಟ್ಟ್ ಇಪ್ಪತ್ತ್‌ಸಾವ್ರ ರೂಪಾಯಿದ್ ಕರೆನ್ಸಿ ನೋಟ್‌ನ ಅವನ ಕೈಗೆ ಕೊಟ್ಟತ್.

'ಇದ್ ಸಾಲ್ದ್ ಸಾರ್'

ಚಂಗುಮಣಿ ಹೇಳ್ತ್.

'ನಮ್ಮ ಎಗ್ರಿಮೆಂಟ್ ಪ್ರಕಾರ ಇಪ್ಪತ್ತ್ ಸಾವ್ರ ಕೊಟ್ಟೊಳೆ'

ದೇವಯ್ಯ ಹೇಳ್ತ್.

'ಅಗ್ರಿಮೆಂಟಲ್ಲ ಸರಿ. ಆದರೆ ನಾನ್ ಕೊಂದದ್ ಯಾರ್‌ನಾಂತ ನೀವ್ ಗ್ಯಾನ ಮಾಡೊಕು. ನಿಮ್ಮ ಕುಟುಂಬಕೆ ಕೇಡಾಗಿದ್ದ ವ್ಯಕ್ತಿನ ಕೊಂದದಕ್ಕೆ ನಂಗೆ ಸಿಕ್ಕುದು ಒಂದ್ ವೇಳೆ ಪಾಸಿಯೇ ಆಗಿರಿಕ್ಕು ಸಾರ್. ನನ್ನ ಆ ಕಷ್ಟನ ಗ್ಯಾನ ಮಾಡಿ ನೀವ್ ಇನ್ನೊಂದ್ ಹತ್ತ್ ಸಾವ್ರ ಹೆಚ್ಚಿಗೆ ಕೊಡೋಕು.'

'ಇನ್ನ್ ಹತ್ತ್ ಸಾವ್ರ ಕೊಡಿಕೆ ಸಾಧ್ಯ ಇಲ್ಲೆ ಚಂಗುಮಣಿ. ಅದ್ ಬಾರಿ ಹೆಚ್ಚಾಗೋತ್.'

ನೀವ್ ಸಾಧ್ಯ ಇಲ್ಲೇತ ಹೇಳಿಕೆ ಆಗದ್. ಹಣ ಕೊಡಿ, ನಾನ್ ಒಮ್ಮೆ ಮದ್ರಾಸ್, ಬೊಂಬಾಯಿ, ಕಲ್ಕತ್ತ, ಬೆಂಗಳೂರ್‌ಗೆಲ್ಲ ಹೋಗಿಬುಟ್ಟ್ ಮಜಾಮಾಡೊಕು. ಒಂದ್ ಹತ್ತ್ ದಿನ ಆದ್ರೂ ಪರ್ವಾಗಿಲ್ಲೆ. ಒಬ್ಬ ಸಾಹುಕಾರನಂಗೆ ನಂಗೆ ಸೊಲ್ಪ ದಿನ ಕಳೆಯೊಕು. ಪ್ಯಾಂಟ್, ಕೋಟ್, ಟೈ ಕಟ್ಟಿ ಬಾರ್‌ಲಿ ಕುದ್ದ್ ವಿಸ್ಕಿ ಕುಡಿಯೋಕು. ಇಬ್ಬರ್ನ ಕೊಂದ ಈ ಚಂಗುಮಣಿದ್ ತಂಗೆನ ಮೊದ್ವೆ ಮಾಡಿಕಣಿಕೆ ಯಾರ್ ಮುಂದೆ ಬಂದವೆ? ಮತ್ತೆ ಯಾಕೆ ನಾನ್ ಹಣ ಮಡ್ಗೊಕು. ನೀವ್ ಗ್ಯಾನ ಮಾಡಿಕಂಡ್ ಕುದ್ದ್ ಹೊತ್ತ್ ಹಾಳ್‌ಮಾಡ್ಬೇಡಿ, ಪೊಲೀಸ್ ಬಂದರೆ ಕಷ್ಟಾದು. ಚಾಕ್ ಬೇರೆ ನನ್ನ ಜೋಬ್‌ಲೇ ಉಟ್ಟು.'

ಚಂಗುಮಣಿ ಪುನಃ ಚಾಕ್‌ನ ತೆಗ್‌ದ್ ಬೋರ್‌ಗುಡ್ಡೆ ದೇವಯ್ಯಂಗೆ ಬಿಡ್ಸಿ ತೋರ್ಸಿತ್ತ್. ಒಣಗಿದ ಆ ಚಾಕ್‌ಂದ ರಕ್ತದ ವಾಸನೆ ಮೂಗಿಗೆ ಬಡ್ತ್.

ದೇವಯ್ಯನ ಮನ್ಸ್‌ಲಿ ಚಂಗುಮಣಿನ ಕಡ್ದ್ ಕಲ್ಲೊಕೊಂತ ಇದ್ದರೂ ಅಂವ ಅದರ್ನೆಲ್ಲಾ ಹೊರಗೆ ತೋರ್ಸದೆ ಪುನಃ ಹತ್ತ್ ಸಾವ್ರ ತೆಗ್ದ್ ಅಂವಂಗೆ ಕೊಟ್ಟತ್.

ಚಂಗುಮಣಿ ಒಂದ್ ತರ ನೆಗಾಡಿಕಂಡ್ ಅಲ್ಲಿಂದ ಹೊರಟ್‌ಹೋತ್.

* * *

ಗೌರನ ಹುಟ್ಟಿಡಗಿತ್. ಇನ್ನೀಗ ರಂಜನ್‌ಗೆ ಎರಡ್ನೇ ಮೊದ್ವೆ ಮಾಡ್ಸಿಕೆ ಗೂಡೆ ನೋಡೊಕು. ಡಾ॥ ತಗಣಿಕಾಕನ ಈಗ ಚಂಗುಮಣಿಗೆ ಕೊಟ್ಟ ಮೂವತ್ತ್ ಸಾವ್ರ ಹೆಚ್ಚಿಗೆ ತಗಣಕು.

ಜೈಲ್‌ಂದ ಬಂದಂದೇ ಅಂವ ಅವಳ ಮುಗ್ಸಿಬುಟ್ಟಿತಲ್ಲಾ. ಅವನಷ್ಟ್ ದೊಡ್ಡ ದುಷ್ಟ ಬ್ಯಾರೆ ಯಾರೂ ಇರಿಕೆ ಸಾಧ್ಯ ಇಲ್ಲೆ. ಆದರೆ ಅಂವ ರಕ್ತ ಒಣಗಿದ ಚಾಕ್‌ನ ತನ್ನ ಮುಂದೆ ಯಾಕೆ ಹಿಡ್‌ತ್‌ಂತ ದೇವಯ್ಯಂಗೆ ಅರ್ಥ ಆತ್ಲೆ.

ಮನೆ ಆಳ್ ಕುಟ್ಟ ಅಥವಾ ಮುತ್ತಕ್ಕ ಈಗ ಬಂದಿರ್ದು. ಬೋರ್‌ಗುಡ್ಡೆ ಮಲೆಗೆ ಬೇಟೆಗೆ ಹೋದ ರಂಜನ್ ಬಾಕನ ಸಾಯಂಕಾಲ ಆದು. ಹೊಟ್ಟೆ ಹಸಿತಾ ಇದ್ರೂ ಬೋರ್‌ಗುಡ್ಡೆ ದೇವಯ್ಯ ಗೌರ ಸತ್ತ ಕುಸಿಲಿ ತನ್ನ ಕ್ಯಾಬಿನ್ಲೇ ಕುದ್ದತ್.

ಟ್ರೀನ್...ಟ್ರೀನ್...

ಟೆಲಿಫೋನ್ ಸದ್ದಾತ್. ದೇವಯ್ಯ ಕುಸೀಲಿ ರಿಸೀವರ್ ಎತ್ತಿ ಕಂಡತ್.

'ಹಲೋ ಯಾರದ್ ಕುಟ್ಟನಾ?'

'ಅಲ್ಲ ಮಾಂವ ನಾನ್ ಗೌರ.'

'ಗೌರಾ!!!?'

ಬೋರ್‌ಗುಡ್ಡೆ ದೇವಯ್ಯನ ಕೈ ಮಾತ್ರ ಅಲ್ಲ ಇಡೀ ತಡಿ ಒಮ್ಮೆ ನಡ್ಗಿತ್.

'ಗೌರನಾ?'

'ಹೌದ್ ಮಾಂವ, ಯಾಕೆ ನನ್ನ ಸ್ವರ ಗೊತಾತ್ಲೆಯಾ ನೀವ್‌ಗೆ?

'ಅಂ....ಅ...ಅಂದರೆ ನಿಂಗೇನೂ ಆತ್ಲೆಲ್ಲಾ...?

ನಂಗೆ ಎಂತ ಆದು? ನಾನ್ ಲಾಯ್ಕ ಒಳೇಲ್ಲ. ನೀವು ಎಂತದ್ ಕೇಳ್ತಾ ಒಳರಿ? ಮಧ್ಯಾಹ್ನ ನೀವ್ ಊಟಕ್ಕೆ ಬಾರದ್ದರ್‌ಂದ ಫೋನ್ ಮಾಡಿ ಕೇಳ್‌ಂತ ಅತ್ತೆ ಹೇಳ್ತ್. ನಾನ್ ಮೊದ್ಲ ಬ್ಯಾಂಕ್‌ಗೆ ಫೋನ್ ಮಾಡ್‌ಕಾಕನ ಈಗ ಹೋದೋಂತ ಹೇಳ್ದೊ. ನೀವು ಈಗ ಬಂದರೆ, ಈಗ ಬಂದರೇಂತ ನಾವ್ ಕಾದ್ ಕುದ್ದಳೊ ಇಲ್ಲಿ. ಇಸ್ಪೊತ್ತ್ ಕಾಣದ್ದರ್‌ಂದ ನಾನ್...

ಅಪ್ಪರಲಿ ದೇವಯ್ಯ ಸಿಟ್ಟ್‌ಲಿ ಮನ್ಸ್‌ಲೇ ನಿನ್ನ ಅವ್ವನ...ಂತ ಹೇಳಿ ಕಂಡ್ ರಿಸೀವರ್ ಕುಕ್ಕಿತ್.

[ಸಶೇಷ]

## ಮೊದು ಮಕ್ಕಳಿಗೆ ಶುಭ ಹಾರೈಕೆಗ

ಸಿದ್ದಾಪುರದ ಅಂಚೆಮನೆ ದಿ॥ ನಂಜುಂಡ ಅವ್ರ ಮಗ ಸುಧೀಕುಮಾರ ಮತ್ತೆ ಕಗ್ಗೋಡ್ಲು ಗ್ರಾಮದ ಮಂದ್ರೀರ ಬಾಲಕೃಷ್ಣ ಇವ್ರ ಮಗ್ಳು ನಮಿತ ಇವ್ರ ಮೊದುವೆ 27-12-98ರ ಐತ್ವಾರ ಮಡಿಕೇರಿ ಕೆಳಗಿನ ಗೌಡ ಸಮಾಜಲಿ ನಡ್ತ್.

## ಬಯಕೆ

ಅರೆಭಾಷಿಕರು ದೇಶಾಭಿಮಾನಿಗಳಾಗಿ ರಟ್ಟೆಯಷ್ಟೇ ಗುಂಡಿಗೆಯೂ ಗಟ್ಟಿ ಇದ್ದು ಆವೇಶದಂತೆ ಅನುಕಂಪಉಳ್ಳವರಾಗಿ ಆದರ್ಶ ಜನಾಂಗವಾಗಿ ಮಾರ್ಪಡುವುದನ್ನೇ ಸಂಗಾತಿ ಬಯಸುತ್ತದೆ.

—ಪಟ್ಟಡ ಪ್ರಭಾಕರ.

# ನಾನ್ ಅಂಜ್ಞಾಣ ನೋಡ್ದ (ಸತ್ಯ ಘಟನೆ)

ಇದ್ ನನ್ನ ಸ್ವಂತ ಅನುಭವದ ಒಂದ್ ಪ್ರಸಂಗ. ಸುಮಾರ್ 36 ವರ್ಷಗಳ ಹಿಂದೆ ಅಂದ್ರೆ 1963 ನೇ ಇಸವಿದ್. ಆಗ ನಾನ್ ಸೋಮವಾರಪೇಟೆ ಹೈಸ್ಕೂಲ್‌ನ 9ನೇ ಕ್ಲಾಸ್‌ಲಿ ಓದ್ತಿದ್ದೆ. ನನ್ನ ಹೆಸರ್ ಶಂಕರನ ಮುತ್ತಪ್ಪನ ಮಜ ಬಸಪ್ಪತ್ತೇಳಿ. ಬಲ್ಲಮಾವಟಿ ಗ್ರಾಮ. ಆ ಸಮಯಲಿ ನನ್ನ ಅಪ್ಪ ಒಂದ್ ನಾಡ್ ಹಸ್‌ನ ಬೆಟ್ಟಗೇರಿಂದ ಯಾರದೋ ಮನೇಂದ ಕ್ರಯಕ್ಕೆ ತಕಂಡ್ ಬಂದಿತ್ತ್. ಆ ಹಸ್‌ನ ತಾಕನ ನಾವೆಲ್ಲಾ ಸಣ್ಣ ಸಣ್ಣ ಮಕ್ಕ. ಅಪ್ಪ ತಂದ ದೊಡ್ಡ ಹಸ್‌ನ ತುಂಬಾ ಆಸೆಲಿ ನೋಡಿದ್ದೋ. ಯಾಕೆತೇಳ್ರೆ ಆಗ ನಮ್ಮ ಮನೇಲಿ ಹೂಡಿಕಿರುವ ಎತ್ತ್‌ಗ ಮಾತ್ರ ಇದ್ದೋ. ಹಸ್‌ತೇಳಿ ಆಗ

ಶಂಕರನ ಬಸಪ್ಪ, ಕುಂಬಾರಕೊಪ್ಪಲು, ಮೈಸೂರು

ತಂದ್ ಕಟ್ಟಿದ ಒಂದೇ ಹಸ್. ಇನ್ನ್ ಸ್ವಲ್ಪ ದಿನಲಿ ಹಸ್ ಕರ್‌ನ ಹಾಕಿರೆ ನಮಿಗೆಲ್ಲಾ ಕಾಫಿಗೆ ಹಾಲ್ ಸಿಕ್ಕಿದೆತ್ತೇಳಿ ಖುಷಿ ಪಟ್ಟ್ ಕನಸ್ ಕಾಣುತ್ತಿದ್ದೋ. ಹಿಂಗೆ 2 ವಾರ ಕಳ್ದಿರ್ದ. ಆ ತಂದ ಹೊಸ ಹಸ್ ಸಿತೆ ಕಾಣದಾತ್. ನಾವ್ ಅಪ್ಪ ಮಕ್ಕ ಎಲ್ಲಾ ಸೇರಿಕಂಡ್ ನಮ್ಮ ಗ್ರಾಮದ ಗದ್ದೆ ಬೈಲ್‌ಗಳ, ಮುಟ್ಟ, ಬಾಣೆ, ಹಡ್ಲ್, ಕಾಡ್‌ತ್ತೇಳಿ ಹುಡ್‌ಕಾಡ್ದೋ. ಅಪ್ಪ ಕೂಡಾ ಆ ಹಸ್‌ನ ತಂದ ಜಾಗಕ್ಕೆ ಹೋಗಿ ಹುಡುಕಿ ಅಲ್ಲೆಲ್ಲಾ ಕೇಳಿಕಂಡ್ ಬರೀ ಕೈಲಿ ಬೇಜಾರ್‌ಲಿ ವಾಪಾಸ್ ಬಾತ್. ಪುನಃ ನಮ್ಮ ಅಪ್ಪ ನಮ್ಮ ಗ್ರಾಮದ ಒಬ್ಬ ಫೇಮಸ್ ಮಲಿಯ ದೇಬುನ ಹತ್ರ ಹೋಗಿ ರಾಶಿ ಮಡ್ಗಿಸಿ ನೋಡ್ತ್. ಆದ್ರೆ ಆದರ್‌ಂದ್ಲೂ ಏನೂ ಪ್ರಯೋಜನ ಆತ್ಲೆ. ಅಲ್ಲಿಗೆ ಹಸ್ ಕಾಣ್ದೆ ನಾಲ್ಕ್ ದಿನ ಕಳ್ತ್.

ಹಿಂಗೇ ನಾವೆಲ್ಲಾ ಬೇಜಾರ್ಲಿ ಇರ್‌ಕಾಕನ ನಮ್ಮ ದೊಡ್ಡ ಅಣ್ಣಯ್ಯ ಆ ಕಾಲಲಿ ಸೋಮವಾರಪೇಟೆಲಿ ಸೈಕಲ್‌ಶಾಪ್ ಮಡಗಿ ಕಂಡಿತ್ತ್. ಅವುಕೆ ಒಬ್ಬ ಮಳಿಯಾಳಿ ಚೊಟ್ಟಕಣಿಯತ್ತೇಳುವವನ ಪರಿಚಯ ಇತ್ತ್. ಆ ಚೊಟ್ಟಕಣಿಯ ಸೋಮವಾರಪೇಟೆ ಮಿಡ್ಲ್ ಸ್ಕೂಲ್ ಹತ್ರಲಿ ಒಂದ್ ರೂಂನ ಬಾಡಿಗೆಗೆ ಹಿಡ್ಕಂಡ್ ಅಂವ ಅಲ್ಲಿ ಇಲ್ಲಿ ಸಣ್ಣಪುಟ್ಟ ಮಂತ್ರ ಪೂಜೆತ್ತೇಳಿಕಂಡ್ ಮಾಡ್‌ತಿತ್ತ್. ಅಂವ ಅಂಜನ ಮಡಿಗಿ ನೋಡಿ ಹೇಳ್ದೆ ಗಡ ತ್ತೇಳಿ ಅಂದ್ ಸಾಯಂಕಾಲಕ್ಕೆ ಅವನ ನಮ್ಮ ಅಣ್ಣಯ್ಯ ಮನೆಗೆ ಕರಕಂಡ್ ಬಾತ್. ಸರಿ ಸಣ್ಣವ್ ಆದ ನಮಿಗೆಲ್ಲಾ ಈ ವಿಚಾರ ತಿಳ್ದ ಬಹಳ ಕುತೂಹಲ ಆತ್. ರಾತ್ರಿ ಎಂಟ್ ಗಂಟೆಗೆ ನೆಲ್ಲಕ್ಕಿ ಮುಂದೆ ದೇವರ ದೀಪ ಹಚ್ಚಿ ನಾವೆಲ್ಲಾ ಕೈ ಮುಗ್ದ ಆತ್. ಆಮೇಲೆ ಈ ಚೊಟ್ಟಕಣಿಯ ಒಂದ್ ಮುಕ್ಕಾಲ್ ತರ್ಸಿ, ಅದರ ಮೇಲೆ ಒಂದ್ ಕಳ್ಸ ಮಡಗಿ ಪೂಜೆ ಮಾಡ್ತ್. ಕೆಳಗೆ ಮೊರದ ಮೇಲೆ ಒಂದ್ ಸಣ್ಣ ಮಂಡಲ ಬರ್ದ್ ಅಕ್ಕಿ, ಕಾಯಿ, ಬಾಳೆಹಣ್ಣ್ ತ್ತೇಳಿ ಮಡ್ಗಿಸಿತ್. ಇದಾದ ಮೇಲೆ ಆ ಕಣಿಯ ಒಂದ್ ಸಣ್ಣ ಡಬ್ಬಂದ ಎರಡ್ ತೊಟ್ಟ್‌ನಸ್ಟ್ ಕಪ್ಪುಮಸಿ ತರದ ಕಾಡಿಗೆನ ಒಂದ್ ವಿಳ್ಯದ ಮೇಲೆ ಹನಿಕಿಸಿತ್. ಮುಕ್ಕಾಲ್ ಮೇಲೆ ಮೊಣ್ಣ್‌ನ ದೀಪನ ಉರಿಸಿ ಮಡಗಿತ್. ಈ ವಿಳ್ಯದೆಲೆನ ಆ ದೀಪದ ಬೆಳಕ್‌ನ ಹತ್ರಕ್ಕೆ ಮಡಗಿತ್. ಏನೋ ಒಂದ್ ಸಣ್ಣ ಮಂತ್ರ ಹೇಳ್ತ್. ಆ ದೀಪದ ಬೆಳಕ್‌ನ ಪ್ರತಿಫಲನ ಈಗ ಈ ಕಾಡಿಗೆ ತೊಟ್ಟ್ ಮೇಲೆ ಮಿಂಚುವಂಗೆ ಕಾಣ್‌ತಿತ್ತ್. ಆಮೇಲೆ ಈ ಕಣಿಯ ನಮ್ಮಲ್ಲೇ ಅಣ್ಣ ತಮ್ಮಂದಿರ ಎಲ್ಲಾ ಕರ್ದ್ ಒಬ್ಬೊಬ್ಬನಾಗಿ ಕುದ್‌ರಿಸಿ ಆ ತೊಟ್ಟ್‌ನೇ ದೃಷ್ಠಿ ಇಟ್ಟ್ ನೋಡಿಕೆ ಹೇಳ್ತ್. ದೇವರ ಗ್ಯಾನ ಮಾಡಿ ಆ ಮೇಲೆ ರೆಪ್ಪೆ ಮುಚ್ಚದೆ ಒಂದೇ ಸಮ ನೋಡಿಕೆ ಹೇಳಿ ಆ ಚೊಟ್ಟ ಒಳಗೆಂಡ ಎಂತದಾದರೂ ರೂಪ ಕಂಡೆದ್ಯಾತಾ ಕೇಳಿಕೆ ಶುರ್‌ಮಾಡ್ತ್. ಆದ್ರೇ ಅದರ್ಲಿ ಅಣ್ಣಂದಿರಿಗೆ ಯಾರಿಗೂ ಏನೂ ಕಂಡತ್ಲೇ. ನನ್ನ ಸರ್ದಿನೂ ಬಾತ್. ದೇವರ ಗ್ಯಾನ ಮಾಡಿ ದೀಪದ ಮುಂದೆ ಕುದ್ದ್‌ಕಂಡ್ ನೋಡಿಕೆ ಶುರು ಮಾಡ್ದೆ. ನಂಗೆ ಏನೂ ಕಂಡತ್ಲೆ ತಮ್ಮ ಕೂಡಾ ನೋಡ್ತ್. ಊಹುಂ, ಅಂವಂಗೂ ಏನೂ ಕಂಡತ್ಲೆ. ಈ ಅಂಜನ ನೋಡವ್ನ ಅವರ ಶರೀರಲಿ ಯಾವುದೇ ಗಾಯ ಆಗಿರಿಕೆ ಆಗದ್ ಗಡ. ನಾಯಿ ಕಚ್ಚಿದ್ ಇಂತದೆಲ್ಲಾ ಆಗದ್, ಕೊನೆಗೆ ನನ್ನ ಸಣ್ಣ ತಮ್ಮ [ಬಾಬಿ]ನ ನೋಡಿಕೆ ಕುದ್ರಿಸಿದೋ. ಅಂವಂಗೆ ನೋಡಿ ಸ್ವಲ್ಪ ಹೊತ್ತಿಗೆ ಹಾಂ...ಹಾಂ...ಕಂಡದೆ ತೇಳ್ತ್. ಎಂಥ ಕಂಡದೆ ನಿಂಗೆತ್ತಾ ಆ ಕಣಿಯ ಕೇಳ್ತ್. ಒಬ್ಬ ಅಜ್ಜ, ಗಡ್ಡ ಮೀಸೆ ಎಲ್ಲಾ ಬೆಳ್ಳಂಗೆ ಆಗುಟ್ಟು, ತಲೆಗೆ ರುಮಾಲ್ ಹಾಕಿಟ್ಟು, ಬಿಳಿ ಬಟ್ಟೆ ಹಾಕುಟ್ಟು ತ್ತೇಳ್ತ್. ಅಷ್ಟೊತ್ತಿಗೆ ನಮ್ಮ ಅಪ್ಪ ಕೈ ಮುಗ್ದೊ. ಇದ್ ನಮ್ಮ ಬೀರ ಆಗಿರುಕ್ಕುತ್ತೇಳಿಕಂಡೊ. ಸರಿ,ಈಗ ಅಂಜನ ದೇವಿ ಬಂದದೆ. ಕಾಣುತ್ತಾ ಉಟ್ಟಾತ್ತೇಳಿ ಕೇಳ್ತ್. ಹೌದು ಕೈಲಿ ದೀಪದಂಗೆ

ಒಂದರ ಹಿಡ್‌ಕಂಡ್ ಬರ್ತಾಉಟ್ಟ್‌ತ್ತೇಳ್ತ್. ಸರಿ ಈಗ ನೀನ್ ಕಣ್ಣ್ ಮುಚ್ಚಿಕಾಗದ್. ಒಂದೇ ಗ್ಯಾನಲಿ ನೋಡ್ತಾ ಇರ್. ಈಗ ಹೆಂಗ್ಸ್‌ಗೆ ಮನ್ಸ್‌ಲೇ ಹೇಳ್ ನಿಮ್ಮ ದನದ ಹಟ್ಟಿನ ತೋರ್‍ಸಿಕೆ. ಹೂಂ ಹಟ್ಟಿ ಕಂಡದೆ, ಹಾಂ ನಿಮ್ಮ ಗದ್ದೆನ ಕಂಡದೇ. ಹೂಂ ಕಂಡದೆ. ನಂಗೆ ಇದರೆಲ್ಲಾ ಕೇಳಿಕಾಕನ ನಗೆ ಬಾತ್. ನಮಿಗೆ ಯಾರಿಗೂ ಕಾಣ್‌ದಿದ್ದುದ್ ಇಂವಂಗೆ ಕಂಡದೆ ಗಡ. ಸುಮ್ ಸುಮ್ಮನೆ ಎಂತೆಲ್ಲೋ ಹೇಳ್ದಿತಾ. ಹಾಂ ಆ ಗದ್ದೆಲಿ ನಿಮ್ಮ ಹಸ್ ಉಟ್ಟಾ ನೋಡ್. ಹೌದು ನಮ್ಮ ಕಲ್ಲ್ ಕೊಡಂಗೆಲಿ ನಮ್ಮ ಸೀತೆ ಹಸ್ ಮೇಯುತಾ ಉಟ್ಟ್. ಈಗ ಅದ್ ಎತ್ತ ತಿರುಗಿ ಕರೆಹತ್ತಿತ್. ಅದ್ ಮನೆ ಮೇಲೆ ದಾರಿಗೆ ಹತ್ತಿತ್. ಅದ್ ಮುಂದೆ ಯಾವ ರಸ್ತೆಗೆ ಇಳ್ತ್? ಅದ್ ಉಂಬಚ್ಚ್‌ಕಾಕನ ಮನೆ ರಸ್ತೆಲಿ ಹೋಗ್ತಾ ಉಟ್ಟ್ ಈಗ ಎಲ್ಲಿ ದಾಟಿತ್? ಅಲ್ಲೇ ಕಾಲ್‌ದಾರಿಲಿ ಹೋಗಿ ಬರೆಕೊಲ್ಲಿ ಹತ್ತಿ ಹೋಗ್ತಾ ಉಟ್ಟ್. ಮುಂದಕೆ ಎಲ್ಲಿ ಹೋತ್, ಪುನಃ ನಾಪೋಕ್ಲುಗೆ ಹೋಗುವ ರಸ್ತೆಲಿ ಹೋಗುತ್ತಾ ಉಟ್ಟ್. ಈಗ ಟೌನ್ ದಾಟಿ ಮೊಟ್ಟೆ ಇಳ್ದ್ ಒಂದು ದೊಡ್ಡ ಬಾಣೆಲಿ ಮೇಯುತಾ ಉಟ್ಟ್. ಆ ಬಾಣೆಲಿ ಬಲ್ದ ಕಡೆ ನಮ್ಮ ಹಾಕಿ ಆಟದ ಗ್ರೌಂಡ್ ಕಂಡದ್ಯಾ? ತ ನಾನ್ ಕೇಳ್ದೆ. ಹೂಂ ಹೌದು ದೊಡ್ಡ ಗ್ರೌಂಡ್, ಅದರ ಎಡ ಬಾಗಲಿ ನಮ್ಮ ಸೀತೆ ಹಸ್ ಮೇಯುತಾ ಉಟ್ಟ್. ನಂಗೆ ಆಶ್ಚರ್ಯ ಆತ್. ಏಕೆ ತ್ತೇಳ್ರೆ ತಮ್ಮ ನಾಪೋಕ್ಲುನ ಒಂದ್ ಸರ್ತಿ ಕೂಡಾ ನೋಡಿತ್ಲೆ. ಈಗ ನಮ್ಮ ಕೊಟ್ಟಮುಡಿ ಹಾಕಿ ಆಟದ ಗ್ರೌಂಡ್‌ನ ಕಣ್ಣ್‌ಲಿ ಕಂಡಂಗೆ ಹೇಳ್ತಲ್ಲಾ? ಸರಿ ನಿಮ್ಮ ಹಸ್ ಅಲ್ಲಿಂದ ಯಾವ ಕಡೆಗೆ ತಿರುಗಿ ಹೊರಟತ್? ಅದ್ ಹಂಗೆ ದನಗಳೊಟ್ಟಿಗೆ ಮೇಲೆ ಗದ್ದೆ ಬೈಲಿಗೆ ಹೋತ್. ಆಗ ಚೊಟ್ಟೆ ಕಣಿಯ ಕೇಳ್ತ್. ಈಗ ನಿಮ್ಮ ಸೀತೆ ಹಸ್ ಎಲ್ಲಿ ಉಟ್ಟ್‌ತಾ? ಈಗ ನಮ್ಮ ಹಸ್ ಒಬ್ಬರ ಮನೆ ದನದ ಹಟ್ಟಿ ಒಳಗೆ ಉಟ್ಟ್. ಕೊಂಬಿಗೆ ಹಗ್ಗ ಹಾಕಿ ಕಟ್ಟಿ ಹಾಕೋಳೊ. ಆ ಮನೆ ಹೆಸರ್‌ನ ಹೇಳ್? ಹಾಂ...ಬಳೆ ಮಾರುವವರ ಮನೆ. ಓಹೋ ಬಳೆಗಾರರ ಮನೆ. ನಮ್ಮ ಅಪ್ಪಂಗೆ ಅಲ್ಲಿ ಕೊಟ್ಟಮುಡಿಲಿ ಇರುವ ಬಳೆಗಾರರ ಮನೆ ಇದ್ದುದು ಗೊತ್ತುಟ್ಟ್‌ತ್ತೇಳ್ತ್. ಆಗ ಅಂವನ ಮನೆನೇ ಇದ್ದುದು ತಾ ಗ್ಯಾನ ಮಾಡ್ದೆ. ಅಪ್ಪ ನನ್ನ ಕರ್ದ್, ಹೇ ಬಸ್ಸಾ ನಾಳೆ ನಾನ್ ನೀನ್ ಇಬ್ಬರು ಅಲ್ಲಿಗೆ ಪೋಯಿ. ನಿಂಗೆ ಆ ಜಾಗ ಗೊತ್ತುಟಲ್ಲಾ ತಾ ಹೇಳ್ತ್. ಎಲ್ಲವಕೂ ಖುಷಿ ಆಗಿ ಹೋತ್. ಇದಾದ ಮೇಲೆ ನಮ್ಮ ಅಪ್ಪ ಇನ್ನೂ ಕೆಲವು ಸುಂಗತಿನ ಕೇಳಿ ಕಂಡೋ. ಮಾರನೇ ದಿನ ಬೆಳಿಗ್ಗೆ ಐದೂವರೆ ಗಂಟೆಗೆ ನಾನು ಮತ್ತೆ ಅಪ್ಪನೂ ಇಬ್ರೂ ಹೊರಟೊ. ಎಂಟೂವರೆ ಗಂಟೆಗೆಲ್ಲಾ ಆ ಬಳೆಗಾರನ ಮನೆಗೆ ತಲುಪಿದೊ. ಅವರ ಮನೆ ದಾರಿಲಿ ಅವರ ಹಟ್ಟಿ ಸಿಕ್ಕಿತ್. ಹಟ್ಟಿ ಒಳಗೆ ನಾನು ಅಪ್ಪನೂ ಸೇರಿ ಕಣ್ಣ್ ಆಡಿಸಿ ನೋಡ್ದೊ. ಸೀತೆ ಹಸ್ ಅಲ್ಲಿತ್ತ್. ನಂಗೆ ಮತ್ತೆ ಅಪ್ಪಂಗೆ ಬಹಳ ಖುಷಿ ಆತ್. ಇಬ್ಬರೂ ಸೀತೆ ಬಾ, ಬಾ ಸೀತೆ ತೇಳಿ ಆ ಹಸ್‌ನ ಮಾತಾಡಿಸಿ ನೆಟ್ಟಂಗೆ ಆ ಬಳೆಗಾರ್ನ ಮನೆಗೆ ಹೋದೊ ಅಲ್ಲಿ ಅಪ್ಪ ಅದೂ ಇದೂ ಮಾತಾಡಿ ಆದ ಮೇಲೆ ಹಿಂಗೆ ನಮ್ಮ ಸೀತೆ ಹಸ್ ತಪ್ಪಿಸಿಕಂಡ್ ಬಂದು ಬುಟ್ಟಿಟು. ಆದ್ರ ನಾವು ನೆನ್ನೆ ಅಂಜನ ಮಡ್ಗಿ ನೋಡ್ಸಿಕಾಕನ ಹಸ್ ನಿಮ್ಮಲ್ಲಿಟ್ಟ್ ತ ಕಂಡ್ ಬಾತ್. ಹಂಗೇ ನಿಮ್ಮ ಮನೆಗೆ ಬಂದೊ. ಬಾಕಾಕನ ನಿಮ್ಮ ಹಟ್ಟಿಲಿ ನಮ್ಮ ಹಸ್‌ನ ಮಾತಾಡಿಸಿಕಂಡೇ ಬಂದೊತ್ತಾ ಅಪ್ಪ ಹೇಳ್ತ್. ಆ ಬಳೆಗಾರ ಹೌದು ಹೌದು, ನೆನ್ನೆಂದ ಈ ಹಸ್ ನಮ್ಮ ದನಗಳೊಟ್ಟಿಗೇ ಮೇಯುತಿತ್ತ್. ಹಾಳಾದ ಈ ಹಸ್‌ನ ದನಗಳಿಗೆ "ಹಭ್ಯಾಳಿ" ಬಾಕಾಕನ ಇವು ಹಿಂಗೆ. ಆತ್ ನಿಮ್ಮ ಹಸ್‌ನ ಹೊಡಕಂಡ್ ಹೋಗಿ ನಮ್ಮದೇನೂ ತಕರಾರಿಲ್ಲೆ ತಾ ಹೇಳ್ದೋ. ನಾನು ಅಪ್ಪನೂ ಅಲ್ಲಿಂದ ಹೊರಡಿಕೆ ತಯಾರಾದೋ. ಆಗ ಬಳೆಗಾರ ಇರಿ ಮುತ್ತಪ್ಪಣ್ಣ ನೀವು ಅಷ್ಟ ದೂರಂದ ಬಂದೊಳರಿ. ಎರಡೆರಡ್ ರೊಟ್ಟಿ ತಿಂದ್ ಕಂಡ್ ಹೋಗಿತ್ತೇಳಿ ಕೈ ತೊಳಿಯಕೆ ನೀರ್‌ನ ಕೊಟ್ಟೊ. ನಂಗೆ ರೊಟ್ಟಿತ್ತೇಳುವ ಸದ್ದ್‌ಗೆ ಹೊಟ್ಟೆ ಜೋರ್ ಹಸಿಯಕೆ ಸುರಾತ್. ನಾವಿಬ್ರು ಎರಡೆರಡ್ ರೊಟ್ಟಿನ ಹಲಸನಕ್ಕಿ ಪೊಜ್ಜಲಿ ತಿಂದೊ. ಆಮೇಲೆ ಆ ಮನೆವು ಬಂದ್ ಹಸ್‌ನ ಬಿಚ್ಚಿಕೊಟ್ಟೊ.

ನಂಗೆ ಈಗಲೂ ನನ್ನ ತಲೇಲಿ ಒಂದ್ ವಿಚಾರ ಕೊರೆತಾ ಉಟ್ಟ್. ಅದೇನೆಂದರೆ ಇಂಥಹ ಒಬ್ಬ ಸಾಧಾರಣ ಮನುಷ್ಯ ಈ ಅಂಜನನ ನೋಡ್ತ ತಾಂತ್ರಿಕ ಸಿದ್ಧಿನ ಕರಗತ ಮಾಡಿಕಂಡ್ ಇದರ ಮೂಲಕ ನಮ್ಮ ಹಸ್‌ನ ಎಲ್ಲಿಂದ ಎಲ್ಲಿಗೆ ಹೋತ್, ಹೆಂಗೆ ಹೋತ್ ತಾ ಹೇಳ್ದ ದೃಶ್ಯನ ಇಷ್ಟೊಂದ್ ಕರಾರುವಕ್ಕಾಗಿ ತೋರ್‍ಸಿತಲ್ಲಾ? ಈಗಿನ ಕಾಲಲಿ ನಾವೆಲ್ಲಾ ಟಿ.ವಿ. ಒಳಗೆ ಸೀನ್ಸ್ ನೋಡ್ದಂಗೇ ಆತ್. ಈ ಅಂಜನಲಿ ಬರುವ ದೃಶ್ಯಗ ಇಂತಹ ಅಗೋಚರ ಶಕ್ತಿನ ನಮ್ಮ ಪೊಲೀಸ್ ಡಿಪಾರ್ಟ್‌ಮೆಂಟ್‌ನವು ಕಳ್ಳರ, ಕೊಲೆಗಾರರ ಹಿಡಿಯಕೆ ಈ ತಾಂತ್ರಿಕತೆನ ಯಾಕೆ ಅನುಸರಿಸಿಕ್ಕಾಗದ್? ಇಂತವುಕೆ ಯಾಕೆ

[20 ನೇ ಪುಟ ನೋಡಿ]

## ಹುಲಿ ಬಾತ್ ಓಡಿಯುಪ್ಪೊ ಓಡಿ

ಒಂದೂರ್‍ಲ್ಲಿ ಅಪ್ಪ, ಅವ್ವ ಇದ್ದವೆ. ಅವುಕೆ ಒಂದ್ ಹೆಣ್ಣ್ ಕೂಸ್ ಇತ್ತ್. ಅವಳ್ನ ಇಸ್ಕೂಲಿಗೆ ಕಳ್ಸಿಕೆ ಸುರು ಮಾಡ್ದೊ. ಆ ಸ್ಕೂಲ್‌ಲಿ ಬರೀ ತುಳು ಮಾತಾಡುವ ಮಕ್ಕಳೇ ಜಾಸ್ತಿ. ಆ ಮಕ್ಕಳಿಗೆ 'ಳಕಾರ' ಬಾದುಲೆ. ಅವು ಕನ್ನಡ ಮಾತಾಡ್ನನ ಕಾಲಿಗೆ 'ಕಾಳು' ತೇಳ್ದು, ಕಣ್ಣ್‌ಗೆ 'ಕನ್ನು' ತೇಳ್ದು, ಅನ್ನಕ್ಕೆ 'ಅಣ್ಣ' ತೇಳ್ದು. ಹಿಂಗೆ ಅವು ಕನ್ನಡ ಮಾತಾಡ್ದು.

ಈ ಕೂಸ್‌ನ ಹೆಸ್ರ್ ಪೊನ್ನಿ ತ. ಆ ತುಳು ಮಾತಾಡ್ವ ಮಕ್ಕ ಅವಳೆ 'ಪೊಣ್ಣಿ'ತ ಕರೆಯದು. ಆ ಪೊನ್ನಿ ಅವ ರೊಟ್ಟಿಗೆ ತುಳು ಮಾತಾಡ್ದು. ಅವ್ಳಗೆ ಸ 'ಳಕಾರ' ಮತೋ್ರ್‍ಇತ್. ಆ ಪೊನ್ನಿ ಮನೇಲಿ ಕನ್ನಡ ಮಾತಾಡ್ದು. ಮನೇಲಿ ಹಾಂಗೆ ಮಾತಾಡಿಕೆ ಸುರುಮಾಡ್ದ್‌ತ ಅಪ್ಪ, ಅವ್ವ ಅದರ್ನ ತಿದ್ದಿತ್ಲೆ. ಆ ಪೊನ್ನಿಗೆ 12 ವರ್ಷ ತುಂಬಿತ್. ಆಗ ಆ ತಲೆ ಕೆಟ್ಟ ಅಪ್ಪ, ಅವ್ವ ಬ್ಯಾಗ ಮದುವೆ ಸ ಮಾಡಿ ಬುಟ್ಟೊ.

ಒಂದ್ ದಿನ ಪೊನ್ನಿನ ಅತ್ತೆ ಹೇಳ್ತ್, ನಾನ್ ಪೇಟೆಗೆ ಹೋಗಿ ಬನ್ನೆ ಬಲಾ. ನೀನ್ ಅನ್ನ, ಗೈಪು ಮಾಡಿಟ್ಟರ್ ತ. ಆತ್ ಅತ್ತೆ ತೇಳ್ತ್ ಪೊನ್ನಿ. ಇವ್ಳ ಅನ್ನ ಮಾಡ್ತ್. ಗೈಪು ಸ ಮಾಡ್ತ್. ಉಪ್ಪು ಉಟ್ಟ, ಹುಳಿ ಉಟ್ಟ, ಕಾರ ಉಟ್ಟತ ರುಚಿ ಸ ನೋಡ್ತ್‌ಲೆ. ಎಂತಕೆ ತೇಳರೆ ಇವ್ಳ ಸಣ್ಣ ಗೂಡೆ. ಅಲ್ಲ? ಗಂಡನ ಮನೆಯುವ್ಕೆ ಇವ್ಳ ಕಂಡರೆ ಬಾಳ ಪ್ರೀತಿ, ಅದೊಂದೇ ಪುಣ್ಯ.

ಪೊನ್ನಿ ಎಲ್ಲವುಕೆ ಊಟ ಇಕ್ಕಿತ್. ಇವ್ಳೂ ಇಕ್ಕಿ ಕಂಡತ್. ಪೊನ್ನಿ ಒಂದು ತುತ್ತು ಬಾಯಿಗೆ ಹಾಕಿತ್. ಇವ್ಳ ಜೋರಾಗಿ 'ಹುಲಿ, ಹುಲಿ, ಹುಲಿ' ತ ಬೊಬ್ಬೆ ಹಾಕಿತ್. ಮನೆಲಿ ಇದ್ದವುಕೆ ಗಾಬರಿ ಆಗಿ ಓಡ್ದೊ. ಪೊನ್ನಿ ಎಂತಕೆ ಕಿರ್ಚಿದ್‌ಂತೇಳಿರೆ ಅವುಳೇ ಮಾಡ್ದ ಗೈಪುಗೆ ಹುಳಿ ಹೆಚ್ಚಾಗಿತ್.

—ಬಾರಿಯಂಡ ಜೋಯಪ್ಪ ದಿವ್ಯ, ಪಾಂದೆ.

---

**ಕೊಡಗು ಸಂಗಾತಿ ಪತ್ರಿಕೆನ**
**ತಕೆಂಡ್ ಓದಿ**

## ಒಮ್ಮೆ ನಗಾಡಿಬುಡಿ

ಬಾಣೆಲಿ ಆದ್ ಇದ್ ಮಾತಾಡ್ಕಂಡ್ ಮೂರು ಜನ ದನ ಮೇಯಿಸುವ ಹೈದಂಗೆ ಚರ್ಚೆ ಮಾಡ್‌ತ್ತಿದ್ದೊ. ಎಂತ ಗೊತ್ತುಟ್ಟಾ....

ಒಬ್ಬ ಹೇಳ್ತ್, ನನ್ನ ಅಜ್ಜ ಒಂದು ಮನೆ ಕಟ್ಟಿತ್ತ್. ಅದ್ ಎಷ್ಟ್ ಎತ್ತರ ಇತ್ತ್ ಅಂತ ಹೇಳ್ರೆ ಅದರ ಮೇಲೆಂದ ಒಂದು ಇಟ್ಟಿಗೆ ಬಿದ್ದರೆ, ಅದ್ ಕೆಳಗೆ ಬಾಕನ 10 ವರ್ಷ ಆಗಿತ್ತ್ ಗಡ.

ಅದ್ಕೆ ಇನ್ನೊಬ್ಬ ಹೇಳ್ದಿ,

ನನ್ನ ಅಜ್ಜನೂ ಒಂದು ಮನೆ ಕಟ್ಟಿತ್ತ್. ಅದ್ ಎಷ್ಟ್ ಎತ್ತರ ಇತ್ತ್ ಅಂತ ಹೇಳ್ರೆ ಅದರ ಮೇಲಿಂದ ಒಂದ್ ಕೂಸ್ ಬಿದ್ದದ್ ಕೆಳಗೆ ಬಾಕನ ಅದ್‌ಅಜ್ಜ ಆಗಿತ್ತ್ ಗಡ.

ಅಷ್ಟಾಕನ ಮೂರನೇಯಂವ ಹೇಳ್ತ್, ಅಷ್ಟೇನಾ? ನಮ್ಮ ಅಜ್ಜ ಒಂದ್ ಮನೆ ಕಟ್ಟಿತ್ತ್. ಅದ್ ಎಸ್ಟ್ ಎತ್ತರ ಇತ್ತ್ ಅಂತ ಹೇಳ್ರೆ, ಅದರ ಮೇಲಿಂದ ಒಂದ್ ಮಂಗ ಬಿದ್ದದ್ ಕೆಳಗೆ ಬಾಕನ ಮನುಷ್ಯ ಆಗಿತ್ ಗಡ.

—ಸಂಗ್ರಹ : ಕೊಂಪುಳಿರ ಎಸ್. ಸಂದೀಪ್,
ಮದೆನಾಡು.

## ಬಹುಮಾನ–ಅವಮಾನ

ಮೈಮೇಲೆ ಧರ್‌ಸಿ ಖಾದಿ ವಸ್ತ್ರ
ಕೈಯಲ್ಲಿ ಹಿಡ್‌ದ್ ಸತ್ಯಾಗ್ರಹ ಅಸ್ತ್ರ
ಹೋರಾಡ್ದೊ ಗಾಂಧಿ ತಾತ
ಆದೊ ಭಾರತ ದೇಶದ ಪಿತ

ನಿಜ ಅವು ನೀಡಿದ್ದೊ ಅಹಿಂಸೆ ತತ್ವ
ಆದ್ರೆ ಇಂದ್ ಅದಿಕ್ಕುಲ್ಯಟ್ಟ ಸತ್ವ
ಎಲ್ಲೆಲ್ಲೂ ಮಾನವ ಪ್ರಾಣಿದ್ ಹಿಂಸೆ
ಭಾಷಣಗಲ್ಲಿ ರೀತಿ–ನೀತಿಗಳ ಪ್ರಶಂಸೆ

ನಿಸ್ವಾರ್ಥಿ ಮಹಾತ್ಮಂಗೆ ಗುಂಡ್‌ನ ಏಟ್
ಮಸಣಲಿ ನೀಡ್‌ದೊ ಭರ್ಜರಿ ಸೀಟ್
ಇದೇ ನಾವ್ ಅವುಕೆ ಕೊಟ್ಟ ಬಹುಮಾನ
ನಮಿಗೆ ಇದ್ ಶುದ್ಧ ಅವಮಾನ.

—ಯಾಲದಾಳು ಈ ಚಂದ್ರಕಲಾ, ಮಡಿಕೇರಿ.

## ಮೊಟ್ಟೆ ತಿಂದ್ರೆ ಕೆಟ್ಟೆ

ನಾನ್ ಸಣ್ಣಂವ ಆಗಿರ್ಕನ ಪಾಲೂರ್‌ನ ನವ್ಮನೇಲಿ ತುಂಬ ಕೋಳಿಗ ಇದ್ದೊ. ಅಂಗಳ ತುಂಬ ಕೋಳಿಗಳೇ ಇರ್‍ತಿದ್ದೊ. ಆಗ ಎಲ್ಲಿ ನೋಡ್ರೆ ಅಲ್ಲಿ ಮೊಟ್ಟೆಗ ಸಿಕ್ತಿದ್ದೊ. ಕಟ್ಲ್ ಮೇಲೆ, ಕಡಿಕೆ ಒಳಗೆ, ಹುಲ್ಲು ಮುಂಡಲಿ, ಹಟ್ಟೆಲಿ ಎಲ್ಲೆಲ್ಲೂ ಮೊಟ್ಟೆಗಳೇ. ನಂಗ ನನ್ನ ತಂಗೆಗೆ ಬೆಳಿಗ್ಗೆ ಎದ್ದಂಗೇ ಓಡಿ ಹೋಗಿ ಮೊಟ್ಟೆ ಕಲೆಕ್ಟ್ ಮಾಡ್ದೇ ಕೆಲ್ಸ.

ಇಂದಿಗೂ ಸಹ ಕೊಡಗ್‌ಲಿ ನೆಂಟರ್ ಬಂದೊ ತೇಳ್ರೆ ಕೋಳಿ ಕುಯ್ಯೊ ಬದ್ಲ್ instant ಮೊಟ್ಟೆ ಗೆಂಡೆ ಸಾರ್‌ದ್ ಮಿನಿ ಗದ್ದಳ ಮಾಡಿ ಕಳ್ಸಿವೆ. ಆದ್ರೆ ಮೊಟ್ಟೆ ತಿಂಬದರ್‌ಂದ ಉಪಯೋಗ್‌ಗಳಿಗಿಂತ ಹಾನಿಗಳೇ ಜಾಸ್ತಿತ ಕೆಲವೇ ಜನ್ರಿಗೆ ಮಾತ್ರ ಗೊತ್ತಿರ್ದು. ಅದ್ ಹೆಂಗೆತೇಳ್ರೆ :

1. ದ್ವಿದಳ ಧಾನ್ಯ, ಕಡಲೆಬೀಜ ಮತ್ತೆ ಬಟಾಣಿ ಕಾಳ್‌ಗ ಮೊಟ್ಟೆಗಿಂತ ಪುಷ್ಟಿಲಿ [Nutrition] ಶೇ. 75 ರಷ್ಟ್ ಉತ್ತಮ. ಬೆಲೆಯೂ ಕಡಿಮೆ. ಮೊಟ್ಟೆಲಿ ವಿಟಮಿನ್ ಮತ್ತೆ ಕಾರ್ಬೋಹೈಡ್ರೇಟ್ ತೀರಾ ಕಡಿಮೆ.

2. ಮೊಟ್ಟೆಲಿ ಕೊಲೆಸ್ಟ್ರಾಲ್ ಪ್ರಮಾಣ ಜಾಸ್ತಿ ಇದ್ದದೆ ಇದ್ ಮೇಣದಂಗೆ ರಕ್ತನಾಳಲಿ, ಪಿತ್ತಜನಕಾಂಗಲಿ [Liver] ಶೇಖರಣೆ ಆಗಿ ಹೃದಯ, ಮಿದುಳು, ಪಿತ್ತಜನಕಾಂಗ ಮತ್ತೆ ಮೂತ್ರಕೋಶಕ್ಕ [Kidney] ಸಂಬಂಧಿಸಿದ ರೋಗಗಳ್ನ ಉಂಟುಮಾಡ್ದೆ.

3. ಮೊಟ್ಟೆ ಸರಿಯಾಗಿ ಜೀರ್ಣ ಆದ್ಲೆ. ಬೇಯಿಸಿದ ಕೂಡ್ಲೆ ಮೊಟ್ಟೆಲಿರುವ ಪುಷ್ಟಿಕಾಂಶ ಸತ್ತ್‌ಹೋದೆ. ಮೊಟ್ಟೆಲಿರುವ ಬಿಳಿ ಪದಾರ್ಥದ ಶೇ. 40–50 ರಷ್ಟ್ ಜೀರ್ಣ ಆಗದೆ, ಹಂಗೆ ಹಾದ್‌ಹೋದಲ್ಲದೆ ಹೊಟ್ಟೆಲಿ ಗ್ಯಾಸ್ ಉತ್ಪತ್ತಿ ಮಾಡ್ದೆ. ಮೊಟ್ಟೆ ತಿಂದ ಕಾಲ್ ಗಂಟೆಯೊಳಗೆ ಹೊಟ್ಟೆಲಿನ ಗ್ಯಾಸ್ ಹೆಂಗೆ ಹೊರಗೋದೆತ ನಿಮ್ಗೆಲ್ಲ ಗೊತ್ತು.

ಮೊಟ್ಟೆ ಒಳಗೇ ಕೊಳ್ತ್ ಹೋಗ್ತಾ ಇದ್ದರೆ ನಮ್ಗೆ ಗುರ್ತಿಸಿಕೆ ಆದ್ಲೆ. ಹೆಂಗೆ ಕೊಳೆತ ಮೊಟ್ಟೆನೇನಾದ್ರ್ ನಾವ್ ತಿಂದ್ರೆ ಅದ್ರಲ್ಲಿ Salmonella ತೇಳುವ ಕ್ರಿಮಿ ವಾಂತಿ ಭೇಧಿ ಉಂಟುಮಾಡ್ದೆ. ಇದ್ರಂದ ಸಾವ್ ಕೂಡ ಸಂಭವಿಸುವ ಸಾಧ್ಯತೆ ಉಟ್ಟ್.

5. ಮೊಟ್ಟೆ ತಿಂದ್ರೆ ಮಕ್ಕಳಿಗೆ ಒಳ್ಳೆದ್, ಬಸ್ರಿಗಳಿಗೆ ಒಳ್ಳೆದ್, ವಯಸ್ಸಾದವ್ಕೆ ಒಳ್ಳೆದ್‌ತೇಳಿ ಬಾರೀ ಪ್ರಚಾರ ಮಾಡಿಯೊಳೊ. ಆದ್ರೆ ಮೊಟ್ಟೆ, ತರಕಾರಿ, ಕಾಯಿಪಲ್ಲೆಗಳಿಗಿಂತ ಒಳ್ಳೆ ಆಹಾರ ಖಂಡಿತ ಅಲ್ಲ. ಸಸ್ಯಹಾರಿಗನೂ ಕೂಡ ಮೊಟ್ಟೆಗೇನ್ ಜೀವ ಇದ್ದದ್ಯಾ? ತೇಳಿ ಮೊಟ್ಟೆ ತಿಂಬಕೆ ಶುರು ಮಾಡಿಯೊಳೊ. "ಹೌದು! ಮೊಟ್ಟೆಲಿ ಜೀವ ಇದ್ದದೆ" ತೇಳಿ ತಂತ್ರಜ್ಞರ್ ಸಾಬೀತ್ ಮಾಡಿಯೊಳೊ.

6. 'ಮೊಟ್ಟೆ ಮಾಂಸಾಹಾರಿ ಗುಂಪಿಗೆ ಸೇರುದ್ಲೆ. ಮೊಟ್ಟೆ ಸಸ್ಯಹಾರಿ'ತೇಳಿ ಕೆಲವು ವಾದ ಮಾಡುವೆ. ಅದ್ ಹೆಂಗೆ? ಮೊಟ್ಟೆ ಹುಟ್ಟ್ದು ಪ್ರಾಣಿ ಪಕ್ಷಿಗಳಿಂದ. ಮೊಟ್ಟೆನ ನಾವು ಅಪಕ್ವವಾದ, ಇನ್ನೂ ಫಲವತ್ತಾಗಿರದ, ಗರ್ಭಪಾತವಾದ ಅಥವಾ ಇನ್ನೂ ಹುಟ್ಟಿರದ–ಕೋಳಿತ ಕರಿಯುಕ್. ಈ ಮೊಟ್ಟೆಗಳ್ನ ಬೆಳೆಯಕೆ ಬುಟ್ರೆ ಆದ್ ಕೋಳಿತಾನೆ ಆದೂ ?! ○

—ಲೇಖನ : ಎಡಿಕೇರಿ ಸುದರ್ಶನ್, ಬೆಂಗಳೂರು.

---

[18ನೇ ಪುಟದಿಂದ]

ಮಾನ್ಯತೆ ಕೊಡುದುಲ್ಲೆ ? ಅಂದರೆ ಕೆಲವು ಸರ್ತಿ ಇವರ ಈ ತಾಂತ್ರಿಕತೆಯು ಉತ್ತರ ಅಸಿಂಧು ಆಗುತ್ತಾ ಇದ್ದೆದಾ? ಅಥವಾ ಇನ್ನೂ ಕೆಲವು ತರದ ತಾಂತ್ರಿಕತೆಯು ಕ್ರಮುಗಳಲ್ಲಿ ಇಂತಹ ನಿಗೂಢ ವಿಚಾರಗಳನ್ನ ಪತ್ತೆ ಹಚ್ಚಿವೆ. ನವ್ಮ ಸರಕಾರ ಎಷ್ಟೋ ಕೆಲವು ನಿಗೂಢ ರಹಸ್ಯಗಳನ್ನ ಪತ್ತೆ ಹಚ್ಚಿಕೆ ಸಾಧ್ಯ ಆಗದೆ ನಿಸ್ಸಾಯಕರಾಗಿ ಎಷ್ಟೋಂದು ತೊಂದರೆ, ಮತ್ತೆ ನಷ್ಟಗಳ ಅನುಭವಿಸುತಾ ಉಟ್ಟ್. ಆದ್ರೂ ನವ್ಮ ವೈಜ್ಞಾನಿಕದ ಈ ಕಾಲಲಿ ಫಿಂಗರ್‌ಪ್ರಿಂಟ್, ನಾಯಿ ಕೈಯಿಂದ ವಾಸನೆ ಹಿಡ್ಸದು ಮತ್ತೆ ಕೆಲವು ಸುಳಿವು ಸಿಕ್ಕುವಂತ ವಸ್ತುಗಳ ಫ್ಲೋರಾನಿಕ್ ಟೆಸ್ಟ್‌ಗಳಿಂದೆಲ್ಲಾ ಎವಿಡೆನ್ಸ್‌ಗಳ ಪ್ರೂ ಮಾಡಿವೆ. ಹಂಗೆ ಈ ಕೆಲಸಕ್ಕೆ ಸಹಾಯ ಆಗುವಂಗೆ ಈ ಅಂಜನ ಮಡುಗಿ ನೋಡಿ ಇದರ ಪ್ರಕಾರನೂ ಅಪರಾಧಿನ ಕೃತ್ಯಕ್ಕೆ ಸಾಕ್ಷಿ ಆಗಿ ಸೇರ್‍ಸಕಲಾ ? ನಿಜ್‌ವಾಗ್ಲೂ ನಾನ್ ಒಬ್ಬ ಹುಟ್ಟ್ ನಾಸ್ತಿಕ. ಇಂತಹ ಶಾಸ್ತ್ರಗಳ ವಿಚಾರ, ಮಂತ್ರ ತಂತ್ರದ ವಿಚಾರ ನನ್ನ ಮನಸ್ಸಿಗೆ ಅಲರ್ಜಿನೇ. ದೇವರು ಮೈ ಮೇಲೆ ಬಂದ್ ಹೇಳ್ದು ಇದರ್‍ನೆಲ್ಲಾ ನಾನ್ ಒಪ್ಪಿಕಂಬುದುಲೆ. ಆದ್ರೊ ಆ ಹಳೆ ಈ ಒಂದ್ ಘಟನೆ. ಅಂಜನಲಿ ನೋಡಿ ನನ್ನ ತವ್ಮ ಗುರ್ತ್ ಇಲ್ಲದ ಜಾಗನ ಸರಿಯಾಗಿ ಹೇಳ್‌ದರ ನಾನ್ ಒಪ್ಪಿಕಂಡೆ. ಬೆಳಿಗ್ಗೆ ಎದ್ದ್ ನೆಟ್ಟಂಗೆ ನವ್ಮ ಹಸ್ ಇದ್ದ ಮನೆಗೇ ಹೋಗಿ ಹಸ್‌ನ ವಾಪಾಸ್ ಹೊಡ್ಕಂಡ್ ಬಂದದ್ ನಿಜ. ಇದಿಕ್ಕೆ ನಾನೇ ಸಾಕ್ಷಿ. ನಾನ್ ಅನಿವಾರ್ಯವಾಗಿ ಮತ್ತು ಆತ್ಮಸಾಕ್ಷಿಯಾಗಿಯೂ ಇದರ ಮೇಲೆ ಭರವಸೆ ಮಡ್ಗಿಯೊಳೆ. ●

# ಚಿರಸ್ಮರಣೆ

**ಮೋಹನ್ ವೈ.**

**ಕಲ್ಲುಮುಟ್ಲು**



**ಜನನ : 6-10-1980**

**ಮರಣ : 27-12-98**

ಭಗವಂತನು ನಿನ್ನ ಆತ್ಮಕ್ಕೆ ಚಿರಶಾಂತಿಯನ್ನು ನೀಡಲಿ ಎಂದು ಪ್ರಾರ್ಥಿಸುವ

ಯಿಂದ,

**ಕಲ್ಲುಮುಟ್ಲು ಬಸಪ್ಪ ಮತ್ತು ರೂಪ, ಬೆಂಗಳೂರು**

**ಕಲ್ಲುಮುಟ್ಲು ನಾಗೇಶ್, ವಿಮಾಲಾಕ್ಷಿ ಮತ್ತು ಮಕ್ಕಳು**

**ಸುಜಾತ, ಮಮತ, ಗೀತಾಂಜಲಿ.**

ಕಾಂತೂರು ಗ್ರಾಮ, ಮುರ್ನಾಡು ಅಂಚೆ, ಮಡಿಕೇರಿ ತಾಲ್ಲೂಕು–571 252.

---


## ಕೊಡಗಿನಲ್ಲಿ ಸ್ವಾತಂತ್ರ್ಯ ಹೋರಾಟಕ್ಕೆ ನಾಂದಿ ಹಾಡಿದ 75 ವರ್ಷದ ಜನಪ್ರಿಯತೆಯ ಹಿರಿಮೆಯುಳ್ಳ ಕನ್ನಡ ದಿನಪತ್ರಿಕೆ "ಕೊಡಗು ದೈನಿಕ" ಇದೀಗ ಆಫ್‌ಸೆಟ್ ಮುದ್ರಣದಲ್ಲಿ ಅತ್ಯಾಕರ್ಷಕವಾಗಿ ಮೂಡಿ ಬರುತ್ತಲಿದೆ

ಕೊಡಗ್ ಗಂಡ್‌ನೆಲ ! ನಮ್ಮ ಭಾಷೆ, ಸಂಸ್ಕೃತಿ, ಕಲೆ, ಸಾಹಿತ್ಯ, ಪರಿಸರ ಹಿಂಗೆ ಎಲ್ಲನ ಯಾರೋ ಹೇಳಿಕೆ ಬದ್ಲ್ ನಾವ್ ನಾವೇ ಹೇಳಿಕೆ ಸುರುಮಾಡ್ರೆ ಹೆಂಗೆ ? ಗೇಂಟೆ ಕಟ್ಟಿ, ಕುಪ್ಪಸದಟ್ಟಿ ತೊಟ್ಟ್...... ಎಲ್ಲವೂ ಕೂಡಿ ಸೋಬಾನೆ ಹಾಡಿ, ಕೋಲ್ ಹೊಡ್ದ್, ಕುಣಿಯಕೆ ಸುರುಮಾಡ್ರೆ ?......ಇದೆಲ್ಲದರ ಸವಿಯಕೆ ಎಲ್ಲಾ ದೊನಿಯಾಗಿ, ಪೊರ್ಲಾಗಿ ಬೆಂಬಿ ಬೆಳ್ಗನೆ ನಿಮ್ಮಲ್ಲಿಗೆ ಬರ್ತಾ ಉಟ್ಟು **ಕೊಡಗು ದೈನಿಕ.** ನಮ್ಮ ನಿಮ್ಮೆಲ್ಲರ ನಡುಲಿ ನೀತಿಲಿ ಪ್ರೀತಿಲಿ ಬೆಸಿಯಕೆ ಎಲ್ಲವುಕು ಸೇರ್ದಾ ನಮ್ಮ ಸಂಸ್ಕೃತಿನ ಉಳ್ಸಿ, ಜಾತಿ-ಜಾತಿನ ನಡುಲಿ ಹೊಸಸೀರೆ ಉಟ್ಟ್, ಹೊತಾರೆ ನಿಮ್ಮ ಬಾಗ್ಲಿಗೆ ಬರ್ತುಟ್ಟು. ಇದರೊಟ್ಟಿಗೆ ನಮ್ಮ ಆಟ, ಪಾಟ, ಕೂಟಗ, ಕಥೆಗ, ಕವನಗ, ಚುಟುಕಗ, ಅರೆಭಾಷೆಲಿ ಹಾಸ್ಯಗ, ಲೇಖನಗ ಹಿಂಗೆ ಹತ್ತ್ ಹಲವ್ ವಿಷಯುಗ ಮೂಡಿ ಬಂದದೆ.

ಅರೆಭಾಷೆ ಲೇಖನಗ ಕೊಡಗ್‌ನ ದಿನಪತ್ರಿಕೆಯೊಂದರ್ಲಿ ಬಾದು ಇದೇ ಸುರು. ನೀವೆಲ್ಲಾ ಇಂದೇ ಚಂದ ದಾರರಾಗಿ ಪತ್ರಿಕೆನ ಕೊಂಡ್ ಓದಕೂತ ನಮ್ಮ ನಮ್ರ ವಿನಂತಿ.

**ಕೊಡಗು ದೈನಿಕ ಬಳಗ**

**ಜೂನಿಯರ್ ಕಾಲೇಜ್ ರಸ್ತೆ,**

**ಮಡಿಕೇರಿ–571 201.**

K R N N-240 10-01-96 TCI Kar. 09592

# ವಾರ್ಷಿಕ ಪುಣ್ಯ ಸ್ಮರಣೆ



**ದಿ|| ನಂಗಾರು ಸೋಮಪ್ಪ ರಾಮಯ್ಯ**

ಜನನ : **27-7-1926**

ಮರಣ : **10-2-1998**

ನಿಮ್ಮ ಸವಿ ನೆನಪುಗಳು ಪ್ರತಿಬಿಂಬಿಸುತ್ತಿರುವ, ಹಿತನುಡಿಗಳು ಪ್ರತಿಧ್ವನಿಸುತ್ತಿರುವ, ನಮ್ಮ ಬದುಕಿನಲ್ಲಿ ನಿಮ್ಮಗಲಿಕೆಯ ಕಟುಸತ್ಯ ಅರಿವಾದಾಗ ಕಣ್ಣಂಚಿನಲ್ಲಿ ಮಿಂಚಿ ಮರೆಯಾಗುವ ಈ ಕಂಬನಿ ನಿಮ್ಮ ಅಗಲಿಕೆಯ ನೋವ ನಿವಾರಿಸುವುದೇ ?

ನಿಮ್ಮ ಆತ್ಮಕ್ಕೆ ಆ ಭಗವಂತನು ಚಿರಶಾಂತಿಯನ್ನು ಕರುಣಿಸಲಿ ಎಂದು ಪ್ರಾರ್ಥಿಸುವ,

ಶ್ರೀಮತಿ ನಂಗಾರು ಮಾಚಮ್ಮ ರಾಮಯ್ಯ
ಶ್ರೀಮತಿ/ಶ್ರೀ ನಂಗಾರು ಸೋಮಪ್ಪ ಪೊನ್ನಪ್ಪ
ಶ್ರೀಮತಿ/ಶ್ರೀ ನಂಗಾರು ಸೋಮಪ್ಪ ಚಂಗಪ್ಪ

ಶ್ರೀಮತಿ ಮೂಲೆ ಮಜ್ಲ ಯಶೋಧ ಚಿಣ್ಣಪ್ಪ
ಶ್ರೀಮತಿ ಪಾಣತ್ತಲೆ ವಸಂತಿ ಪಳಂಗಪ್ಪ

ಶ್ರೀ ನಂಗಾರು ರಾಮಯ್ಯ ನಾಣಯ್ಯ ಮತ್ತು
ಶ್ರೀಮತಿ ಗೀತಾ ನಾಣಯ್ಯ
ಶ್ರೀ ನಂಗಾರು ರಾಮಯ್ಯ ಮೋಹನ ಮತ್ತು
ಶ್ರೀಮತಿ ಸುಲೋಚನ ಮೋಹನ
ಶ್ರೀ ನಂಗಾರು ರಾಮಯ್ಯ ನಿಂಗರಾಜು ಮತ್ತು
ಶ್ರೀಮತಿ ಸುಮಿತ ನಿಂಗರಾಜು

ಮೊಮ್ಮಕ್ಕಳಾದ

**ಆಶಿರ, ಆಶಿತ ಅಶ್ವಿನ್**
**ದರ್ಶಿನಿ, ನವ್ಯ, ಸ್ಫೂರ್ತಿ**
**ರಮ್ಯ, ಗೀತಾ, ದಿಲೀಪ್**
**ಯಶವಂತ್, ಲಕ್ಷ್ಮಿ, ಮೋದನ್**
**ರಜನಿ, ಗೀತಾ, ಚಂದನ್**

Printed by M.K. Thammaiah and Published by Kodagu Sangathi on behalf of Pattada P. Sheelamani and Printed at ASHIRWAD PRINTERS, 180/A, 6th Main, Vinayakanagar, Mysore - 12. Published at Mysore, Editor PATTADA P. SHEELAMANI, No: 35, 1st Cross, 4th Block ( Near Divisional Telephone Office), Jayalakshmipuram, Mysore - 570 012 ✆ 516771